# ವರ್ಧಾ ಯಾತ್ರೆ

**ಸಿದ್ದವನಹಳ್ಳಿ ಕೃಷ್ಣಶರ್ಮ**

**ಗಾಂಧೀ ಸಾಹಿತ್ಯ ಸಂಘ**

ಮಲ್ಲೇಶ್ವರಂ :: ಬೆಂಗಳೂರು.

# ಮುನ್ನುಡಿ

೧

‘ತ್ವರೋತ್ತಿಷ್ಠ ಶ್ರೇಷ್ಠಂ
ಸುಯುಗಮಿಹ ನೇದಿಷ್ಠಮಭಯಂ
ಸಕೃದ್ದೃಷ್ಟ್ವಾ ಪ್ರೇಷ್ಠಂ
ಭುವನಪರಮೇಷ್ಠಂ ತವಪುರಾ
ಯುಗೋಪಾಸ್ಯಂ ವಿಶ್ವಾ
ಸ್ತುತಚರಣರೇಣುಂ ನರಹರಿಂ
ಕೃತಾರ್ಥತ್ವಂ ಯಾತು
ಪ್ರಭವತು ಚ ಜೀವಃ ಸಪದಿತೇ’

‘ತಕ್ಷಣ ಎದ್ದೇಳು. ನಿರ್ಭಯದ ಮಹಾಯುಗವು ರೂಪುಗೊಳ್ಳು ತ್ತಲಿದೆ. ಇದೋ ಕರಗತವಾಗುತ್ತಲಿದೆ. ಯಾವನ ಪಾದಧೂಳಿಯನ್ನು ವಿಶ್ವವೇ ಸ್ತೋತ್ರಮಾಡುತ್ತಲಿದೆಯೋ ಆ ಮಾನವೋತ್ತಮನನ್ನು, ಜಗ ದಾನಂದದಾಯಕನನ್ನು, ಯುಗದೇವನನ್ನು ನೋಡು. ಕೂಡಲೇ ನಿನ್ನ ಜೀವವು ಅನುಗೃಹೀತವಾಗಲಿ; ಘನತೆಗೇರಲಿ.’ ಭಕ್ತರೊಬ್ಬರು ಸ್ವಾಮಿ ವಿವೇಕಾನಂದರನ್ನು ಲಕ್ಷ್ಯದಲ್ಲಿಟ್ಟುಕೊಂಡು ಹೇಳಿದ ಮಾತಿದು. ಈ ಮಾತನ್ನೇ ನಾನು ಗಾಂಧೀಜಿಯವರನ್ನು ಕುರಿತು ಇಂದು ಹೇಳಬಯಸು ತ್ತೇನೆ. ಬಾಪೂಜಿಯೇ ಇಂದಿನ ಯುಗದೇವ.

ವರ್ಧಾ ಯುಗದೇವನ ಮಠ, ಗುಡಿ, ಗುಹೆ, ಗುಡಿಸಲು–ಯಾರು ಯಾರಿಗೆ ಯಾವ ಯಾವ ಹೆಸರು ಪ್ರಿಯವೋ ಅದನ್ನೇ ಬಳಸಲಿ. ರಾಷ್ಟ್ರೀಯ ಭಾರತದ ನವಪೆಹಲಿಯೆನ್ನಿ; ಕಾಶಿರಾಮೇಶ್ವರವೆನ್ನಿ ; ಘಟಿಕಾಸ್ಥಾನವೆನ್ನಿ ; ಯೋಗಶಾಲೆಯೆನ್ನಿ; ಪ್ರಯೋಗಶಾಲೆಯೆನ್ನಿ ; ಯಾಗಶಾಲೆಯೆನ್ನಿ ; ಏನೆಂದು ಕರೆದರೂ ಅದಕ್ಕೆ ಸಲ್ಲುತ್ತದೆ. ಅದು ಇಂದು ಮಹಾಕ್ಷೇತ್ರ. ಆ ಕ್ಷೇತ್ರಕ್ಕೆ ನಿತ್ಯವೂ ಹೋಗಿಬರುವ ಯಾತ್ರಿಕರಿಗೆ ಲೆಕ್ಕವೇ ಇಲ್ಲ. ಭಾರ ತೀಯರನ್ನು ಮಾತ್ರವಲ್ಲ ಜಗತ್ತಿನ ಮೂಲೆಮೂಲೆಗಳಿಂದ ನಾನಾಜನಾಂಗ

ಪ್ರತಿನಿಧಿಗಳ ಹೃದಯಗಳನ್ನು ವರ್ಧಾ ಆಕರ್ಷಣ ಮಾಡುತ್ತಿದೆ. ಬಂದವರೆಲ್ಲ ಆನಂದತೀರ್ಥದಲ್ಲಿ ಮುಳುಗಿ ಕೃತಾರ್ಥರಾಗುತ್ತಲಿದ್ದಾರೆ.

ರಾಷ್ಟ್ರನಿರ್ಮಾಣ ಶಿಲ್ಪಿಗಳೆಲ್ಲ ಇಲ್ಲಿ ಸೇರಿದ್ದಾರೆ. ರಾಷ್ಟ್ರಸೃಷ್ಟಿಯಾಗುತ್ತಿದೆ. ಆ ಸೃಷ್ಟಿಭಾಗ್ಯವನ್ನು ಅನುಭವಿಸಬೇಕೆ? ಆ ಶಿಲ್ಪಿಗಳನ್ನು ನೋಡಬೇಕೆ? 'ಮಾನವವಿನಿರ್ಮಿತ ಸೂತ್ರಧಾರಿ'ಗಳೆನಿಸಿ ನಗುತ್ತ ನಲಿಯುತ್ತಲಿರುವ ಗಾಂಧೀಜಿ; ಮಗನ್‌ವಾಡಿಯ ಉದ್ಯೋಗಮಂದಿರದಲ್ಲಿ 'ಮೂವಿಂಗ್ ಆಫೀಸಿ'ನಂತಿರುವ ಕುಮಾರಪ್ಪ; ಆತನ ಭ್ರಾತೃ ಭರತ; ಭರತನ ಕೈಹಿಡಿದ ವಿದ್ಯಾವತಿ ಸೀತಾದೇವಿ; ಬೇಸಾಯ ವಿಭಾಗದ ನೇಗಿಲಯೋಗಿ ಬುಲ್ಲನ್-ಬುಳ್ಳೇಗೌಡ; ಗಾಂಧೀಮಠದ ಮಹಂತ, 'ಖಾದಿಲಾಲ್' ಸೇಠ ಜಮ್ನಾಲಾಲ್ ಬಜಾಜ್; ವರ್ಧಾ ಶಿಕ್ಷಣವಿಧಾನ ವಿಭಾಗದ ಸಿಂಹಳ ಸೈಂಧವ ಆರ್ಯನಾಯಕಂ; ಅವರ ಧರ್ಮಪತ್ನಿ ಶ್ರೀಮತಿ ಆಶಾದೇವಿ; ಜಗಜ್ಜ್ಯೋತ ಜ್ಞಾನಯೋಗಿ ಪೌನಾರಿನ ವಿನೋಬಾ; ಐಹಿಕ ಭೋಗಭಾಗ್ಯಗಳನ್ನು ಕಾಲಲ್ಲಿ ಒದ್ದ ಮೀರಾಬೇನ್; ಗಾಂಧೀತತ್ವ ಪ್ರಚಾರಕ ಕಾಕಾ ಕಾಲೇಲಕರ; ಹಟಯೋಗಿ ಭನ್ಸಾಲೆಭಾಯಿ; ಚರ್ಮಾಲಯದ ವಾಳೂಂಜ್‌ಕರ್; ಮಹಿಲಾಶ್ರಮದ ನಂದಾದೀಪ ಶ್ರೀಮತಿ ಶಾಂತಾಬೇನ್; ಬಾಪೂಜಿಯ ನೆರಳಾದ ಪಟ್ಟಶಿಷ್ಯ ಮಹದೇವ ದೇಸಾಯಿ; ಲೆಕ್ಕವಿಲ್ಲದಷ್ಟು ಮಂದಿ.

ವರ್ಧಾ ಜಗತ್ತಿನ ಜೀವನ ಶೋಭೆಯನ್ನು ಶ್ರೀ. ಕೃಷ್ಣಶರ್ಮರೇ ವರ್ಣಿಸಬೇಕು. ಆ ಜೀವಲೋಕದಲ್ಲಿ ಸುಳಿದಾಡುವ ಪಾತ್ರಗಳ ಪರಿಚಯವನ್ನು ಅವರೇ ಮಾಡಿಕೊಡಬೇಕು. ಶರ್ಮರು ರಸಜ್ಞರು; ಭಾವಜ್ಞರು ಕಲಾವಿದರು; ಮೇಲಾಗಿ ವಿಮರ್ಶಕರು. ಅವರು ವರ್ಧಾಯಾತ್ರೆ ಮಾಡಿದರು. ಅವರ ಕಣ್ಣು ಕಂಡುದನ್ನು, ಕಿವಿ ಕೇಳಿದ್ದನ್ನು, ಮನಸ್ಸು ಗ್ರಹಿಸಿದ್ದನ್ನು ಎಲ್ಲವನ್ನೂ ಚಾಚೂ ತಪ್ಪದೆ ಇಲ್ಲಿ ಕೊಟ್ಟಿದ್ದಾರೆ. ಮಾತು ಮಾತಿನ ಮೇಲೂ ಶಕ್ತಿಯ, ಸ್ವಾತಂತ್ರ್ಯದ, ಹಾಸ್ಯದ ಮುದ್ರೆಯನ್ನೊತ್ತಿದ್ದಾರೆ. ಕೆಲವು ಕಡೆ ಅವರ ಪರವಶತೆಯು ಅವರ ಗದ್ಯವನ್ನು ಕವಿತೆಯ ಮಟ್ಟಕ್ಕೇರಿಸುತ್ತದೆ. ವಾಚಕರನ್ನು ಮೇಲಕ್ಕೆಳೆಯುತ್ತದೆ.

ರಾಷ್ಟ್ರಭಾರತದ ಜೀವನ, ದರ್ಶನ, ಪಾತ್ರಪರಿಚಯ ಮಾಡಿಕೊಳ್ಳಲು ಇರುವ ಸಾಹಿತ್ಯ ಸ್ವಲ್ಪ. ಕನ್ನಡದಲ್ಲಂತೂ ಇಲ್ಲವೇ ಇಲ್ಲ.

ಈ ಪುಸ್ತಕವು ಕನ್ನಡಿಗರಿಗೆ ದೊರೆತ ಅಪೂರ್ವ ಲಾಭವೆನ್ನಬೇಕು ಗಾಂಧೀಜಿಯವರ ಸತ್ಯಶೋಧನೆ, ಜವಾಹರಲಾಲರ ಆತ್ಮಕಥೆ, ಪಟ್ಟಾಭಿ ಯವರ ಕಾಂಗ್ರೆಸ್ ಇತಿಹಾಸ ಈ ಗ್ರಂಥಗಳ ಜತೆಯಲ್ಲಿ ಈ ಪುಟ್ಟ ಪುಸ್ತಕ ವನ್ನು ಓದಬೇಕು.

ತತ್ವಬೋಧೆ ದೊಡ್ಡದಲ್ಲ; ಆ ತತ್ವವನ್ನು ನಿತ್ಯ ಜೀವನದಲ್ಲಿ, ಸಣ್ಣ ಪುಟ್ಟ ಕೆಲಸಗಳಲ್ಲಿ ಸಹ ಪ್ರಯೋಗಮಾಡಿ, ಜೀವಲೋಕವನ್ನು ನಡೆಸು ವುದೇ ದೊಡ್ಡದು. ಅಂತಹ ಮಹಾಪ್ರಯೋಗಶಾಲೆ ವರ್ಧಾ. ವರ್ಧಾ ಯಾತ್ರೆ ಮಹಾಯಾತ್ರೆ. ಶ್ರೀ ಶರ್ಮರು ಈ ಮಹಾಯಾತ್ರಾಫಲವನ್ನು ಕನ್ನಡಿಗರಿಗೆ ತಕ್ಕಮಟ್ಟಿಗೆ ಮಾಡಿಕೊಟ್ಟಿದ್ದಾರೆ. ವರ್ಧಾ ಚಿತ್ರಗಳು ಕಣ್ಣಿಗೆ ಕಟ್ಟಿದಂತಿವೆ. ಗಾಂಧೀ–ಜಮ್ನಾಲಾಲರ ಕೋಣೆಗಳೇ; ಗೆಸ್ಟ್ ಔಟೀ; ಅತಿಥಿಗಳ ಸಮಾರಾಧನೆಯಲ್ಲಿನ ಅನ್ನರಾಜರ ಪ್ರವೇಶವೇ; ಅಸಂಖ್ಯಾತ ಜೇಬುಗಳ ಕುಮಾರಪ್ಪನ ಬನೀನೆ; ನಿರ್ಗುಣ ಬ್ರಹ್ಮವಾದ ಚಹಾವೆ; ಪೌನಾರಿನ ಅಮರ ಮುಹೂರ್ತವೆ; ಕಾಲ್ನಡಿಗೆಯಿಂದ ಸವೆದ ಸೇಗಾಂ ಹಾದಿಯೆ; ತಾವು ಓಡಿ ಶಾಂತಿಗೆ ನಗುವನ್ನು ಕಲಿಸಿದ ಬಾಪೂಜಿ ಯವರ ಓಟವೇ; ಅವರ ಊಟವೇ; ಹಪ್ಪಳದ ಸವಿಯೆ; ಗಾಂಧೀ ಅಂಗ ರಕ್ಷಕಳಾದ ಅಬಲೆಯೆ; ಬಾಪೂಜಿಯವರಿಗೆ ಜವಾಹರಲಾಲರು ಕೊಟ್ಟಿರುವ ಗಡಿಯಾರವೆ; ಬಾಪೂಜಿಯವರ ಟಬ್ಬಿನ ಸುಖಸ್ನಾನವೆ; ಭನಸಾಲಿ ಭಾಯಿಗಳ ಬೇವಿನ ಸೊಪ್ಪು ಮೇಯೋಣವೆ; ಕೈಜಾಗಟೆಯ ಚೀನದ ಬೌದ್ಧಭಿಕ್ಷುವೇ; ಪಟ್ಟಾಭಿ ಕೃಪಾಲಾನಿಗಳ ವಾಗ್ಬಾಣಗಳೇ; ಅಡಿಗೆ ಮನೆ ಯಲ್ಲಿ ಕಸ್ತೂರಬಾ ಕಾಲು ಕಾಲಿಗೆ ತೊಡರಿಕೊಳ್ಳುವ ಮೊಮ್ಮಗ ಕನೂವೆ; ಒಂದನ್ನು ಮೀರಿಸಿದ್ದೊಂದು.

ಜೀವನವು ಸುಖ;
ಜೀವನವು ಭವ್ಯ;
ಜೀವನವು ಸ್ವರ್ಗ.

ಎಂದು ಅವುಗಳನ್ನು ನೋಡಿದವರ ಬಾಯಲ್ಲಿ ಅನ್ನಿಸಿ, ಅವರನ್ನು ಕುಣಿಸು

ವಂತಹ ಚಿತ್ರಗಳು! ಪಟ್ಟಾವರಸೆಯ ಪಟ್ಟಾಭಿ, ದ್ವಾರದೇವತೆ ಮಣಿರ್ಜಿ, ಉಗ್ರಬ್ರಹ್ಮಚಾರಿ ಕೃಪಾಲಾನಿ, ತಾರ್ಕಿಕ ಸಿಂಹ ರಾಜಾಜಿ, ವಜ್ರಹೃದಯ ಸರದಾರ್ ಈ ರೀತಿ ಒಂದೊಂದು ವಿಶೇಷಣ ಮಾತ್ರದಿಂದ ಶರ್ಮರು ನಾಯಕರ ಪರಿಚಯವನ್ನು ವಾಚಕರಿಗೆ ಮಾಡಿಕೊಡುವ ಪ್ರಯತ್ನ ಮಾಡಿದ್ದಾರೆ.

ನಾನು ಹೇಳಬೇಕೆಂದು ಉದ್ದೇಶಪಟ್ಟಿದ್ದಕ್ಕಿಂತ ಹೆಚ್ಚಾಗಿ ಹೇಳಿದೆ ನೆಂದು ಕಾಣುತ್ತದೆ. ಒಂದು ವೇಳೆ ಹಾಗೆ ಆಗಿದ್ದರೆ ಪುಸ್ತಕ ಪಠನವು ನನ್ನಲ್ಲಿ ಉಂಟುಮಾಡಿರುವ ಉತ್ಸಾಹವೇ ಅದಕ್ಕೆ ಕಾರಣ.

ಶ್ರೀ ಕೃಷ್ಣಶರ್ಮರು ಈ ಪುಸ್ತಕಕ್ಕೆ ಮುನ್ನುಡಿ ಬರೆಯಲು ನನ್ನನ್ನೇಕೆ ನೇಮಿಸಿದರೆಂಬ ಪ್ರಶ್ನೆಗೆ ನನಗೆ ಉತ್ತರ ಸಿಕ್ಕಿಲ್ಲ. ಶರ್ಮರು ನನ್ನ ಬಂಧು ಗಳು; ಅದಕ್ಕಿಂತ ಮಿಗಿಲಾಗಿ ನನ್ನ ಸ್ನೇಹಿತರು. ನನ್ನ ಅಂತರಂಗಕ್ಕೆ ಸೇರಿದವರು. "ನೀವು ಇದಕ್ಕೆ ಮುನ್ನುಡಿ ಬರೆಯಬೇಕು" ಎಂದ ಮೇಲೆ "ಆಗುವುದಿಲ್ಲ" ಅನ್ನುವುದು ನಡತೆಯಲ್ಲ. ಇದಿಷ್ಟೆ ಈ ನಾಲ್ಕು ಮಾತು ಗಳನ್ನು ಬರೆಯಲು ನನಗಿರುವ ಅರ್ಹತೆ.

ಬೆಂಗಳೂರು ನಗರ
೨೨-೧೧-೪೯

**ತಿರುಮಲೆ ತಾತಾಚಾರ್ಯ ಶರ್ಮ**

ನನ್ನ ಗೆಳೆಯರಾದ ಸಿದ್ದವ್ವನಹಳ್ಳಿ ಕೃಷ್ಣಶರ್ಮರ 'ವರ್ಧಾ ಯಾತ್ರೆ'ಯು ಅನೇಕ ದೃಷ್ಟಿಯಿಂದ ಅಪೂರ್ವವಾದ ಗ್ರಂಥವಾಗಿದೆ. ಗಾಂಧೀಯುಗವು ಪ್ರಾರಂಭವಾದಂದಿನಿಂದ ಮಹಾತ್ಮಾಜೀಯವರ ಹಲ ಕೆಲವು ಲೇಖನಗಳನ್ನು ಭಾಷಾಂತರಿಸುವದು ವೃತ್ತಪತ್ರಿಕೆಗಳ ವ್ಯವಹಾರ ದಲ್ಲಿ ಸೇರಿದೆ. ಅವರ ಆತ್ಮವೃತ್ತ, ಹಿಂದೀ ಸ್ವರಾಜ್ಯ, ಅನಾಸಕ್ತಿಯೋಗ, ಮಂಗಲಪ್ರಭಾತಗಳು ಹೀಗೆಯೇ ಅನುವಾದಿತವಾದುವು. ಗಾಂಧೀ ವಿಚಾರ ದೋಹನವನ್ನು ಕನ್ನಡಿಗಾರಾರೂ ಮಾಡದಿದ್ದರೂ ಅದೂ ಬೇರೆ ಭಾಷೆಯಿಂದ ನಮ್ಮ ನುಡಿಗಿಳಿಯಿತು. ಮಹಾತ್ಮರನ್ನೂ ಅವರ ಆಶ್ರಮ ವನ್ನೂ ಕಂಡು ಬಂದವರು ಋಣಮೋಚನೆಗಾಗಿಯೊ, ಸಂಪ್ರದಾಯಕ್ಕಾ ಗಿಯೋ ನೀರಸವರದಿಗಳನ್ನು ಆಗೀಗ ಪತ್ರಿಕೆಗಳಲ್ಲಿ ಪ್ರಕಟಿಸಿದ್ದಾರೆ. ಒಂದೆರಡು ಸಲ ಸರಸಬರಹಗಳು ಒಡಮೂಡಿದ್ದುಂಟು. 'ವರ್ಧಾ ಯಾತ್ರೆ'ಯು ಇಂಥ ಎಲ್ಲ ಬರೆವಣಿಗೆಗಳಿಗೆ ಅಪವಾದವಾಗಿದೆ. ಅವರ ಕೆಲ ಭಾಗವು ತುಣುಕು ತುಣುಕಾಗಿ 'ವಿಶ್ವಕರ್ಣಾಟಕ'ದಲ್ಲಿ ಪ್ರಕಟಿತ ವಾಗುತ್ತ ಬಂದಿದ್ದರೂ ಅದಕ್ಕೊಂದು ಅಖಂಡಸೌಂದರ್ಯವಿದೆ. ಒಂದು ಕಳೆ, ದೃಷ್ಟಿ, ಜೀವ ವರ್ಧಾಯಾತ್ರೆ'ಗೆ ವಕ್ತಿತ್ವವನ್ನು ತಂದಿದೆ. ಆ ವ್ಯಕ್ತಿತ್ವ ಶರ್ಮರದೇ ಆಗಿದೆ. ಗಾಂಧೀಶಕ್ತಿಯ ಅಷ್ಟಾದಶಭುಜಗಳೊಳಗಿನ ಬತ್ತೀ ಸಾಯುಧಗಳ ಹೊಳವನ್ನು 'ವರ್ಧಾಯಾತ್ರೆ'ಯಲ್ಲಿ ನೋಡಬಹುದು. ಮಹಾತ್ಮಾಜೀಯವರ ಪ್ರಭಾವಳಿಯೊಳಗಿನ ಇಂದ್ರ ಧನುವಿಗಿಂತಲೂ ಮಿಗಿಲಾದ ವರ್ಣವಿಲಾಸದ ಪ್ರಕಾಶಪ್ರಯೋಗಗಳು ಇಲ್ಲಿ ತಲೆದೋರಿವೆ.

'ವರ್ಧಾಯಾತ್ರೆ'ಯು ತಿಳಿವಿನಲ್ಲಿ ತಾತ್ತ್ವಿಕಗ್ರಂಥ, ರೀತಿಯಲ್ಲಿ ಉತ್ತಮ ಸಾಹಿತ್ಯ. ಚಿತ್ರಿಕನ ಚಿತ್ರಕರ್ಮಕೌಶಲ್ಯದೊಡನೊಡನೆ ನಾಟಕ ಕಾರನ ಪಾತ್ರಾವಿಷ್ಕರಣದ ಪ್ರಾವೀಣ್ಯವು ಇಲ್ಲಿ ಮಸಗಿದೆ. 'ವರ್ಧಾ ಯಾತ್ರೆ'ಯು ಇಂದಿನ ಮಹಾಭಾರತದ ಜಾಗ್ರತಜೀವನದ ಇತಿಹಾಸದ ಸೆರಗು. ಕಾಲನಟನು ಕುಣಿದು ಕುಣಿಸುತ್ತಿರುವ ಹಲವು ಭೂತಗಳ ಕೆಲವು ಭಂಗಿಗಳು ಇಲ್ಲಿ ನಿರೂಪಿತವಾಗಿವೆ. ಕಥನಕೌಶಲ, ತತ್ತ್ವಗ್ರಥನ, ವರ್ಣನ, ವಿನೋದವಿಲಾಸ ಮೊದಲಾದ ಅನೇಕ ಗುಣಗಳು ಕೃಷ್ಣಶರ್ಮರ

ಮನಃಶಕ್ತಿಗಳ ಪರಿಪಾಕದೊಡನೆ ಸ್ವಚ್ಛಂದವಾಗಿ ಇಲ್ಲಿ ಬಂದಿವೆ. ಇವೆಲ್ಲಕ್ಕೂ ಮೀರಿದ ಯಾತ್ರಿಕನ ಮನೋಭಾವವೊಂದು ಹೊಸದಾಗಿ ಮೂಡಿದೆ. ಅಹಂಕಾರ ತಗ್ಗಲಿರುವ ವಿನಯದಲ್ಲಿ ಅಲ್ಪತ್ವದಲ್ಲಿ ಹುದುಗದ ಪ್ರೌಢಿಯೊಂದು ಬೆರೆತು ನವರಸಾಯನವಾಗಿದೆ. ವಿಭೂತಿಯಿರದ ಸ್ಥಳವು ಯಾತ್ರೆಗೆ ಯೋಗ್ಯವಲ್ಲ. ದೋಷ ತಗ್ಗಿಸಿ ಗುಣ ಹಿಗ್ಗಿಸದ ಯಾತ್ರೆ ಯಾತ್ರೆಯಲ್ಲ. ಶರ್ಮರ 'ವರ್ಧಾಯಾತ್ರೆ'ಯು ಓದುಗರಲ್ಲಿಯೂ ಈ ಪರಿಣಾಮ ಮಾಡದೆ ಬಿಡದು.

ಕೃಷ್ಣಶರ್ಮರು ನಾಟಕದ ರಂಗಭೂಮಿಯಿಂದ ರಾಜಕೀಯ ರಂಗ ಭೂಮಿಯವರೆಗೆ ಎಲ್ಲ ರಂಗದಲ್ಲಿಯೂ ಹೆಜ್ಜೆಯಿಕ್ಕಿದ್ದಾರೆ. ಹೆಣ್ಣಿನ ನಟನೆ ಮೊದಲುಗೊಂಡು ಗಂಡೆದೆಗೆ ಗುಂಡಿಸೆಯುವ ಎದೆಗಾರಿಕೆಯವರೆಗೆ ಯಾವ ದಕ್ಕೂ ಹಿಂಜರಿದಿಲ್ಲ. ಹರಟೆಮಲ್ಲರಾಗಿ ಮಾತು ಮಸೆಯ ಹೊರಟವರು ಜೀವ ನದ ಮಾಮಸಕದಲ್ಲಿ ಮನವನ್ನೆ ಸಾಣೆಗೆ ಹಿಡಿದುಕೊಂಡಿದ್ದಾರೆ. 'ಸರ್ವಜ್ಞ' ನನ್ನು ಒರೆಗೆ ಹಚ್ಚಿ, 'ಬೋರೆಗೌಡನ ಭಾಗ್ಯ'ವಳೆದು ನೋಡಿ, 'ಕನ್ನಡದ ಕಿಡಿ'ಗಳಲ್ಲಿ ಕಿಡಿಕಾರಿ, ಸಾಹಿತ್ಯದ ಚಪಲ ತೀರಿಸಿದೀ ನಾಲಗೆಯು ವಿಭೂತಿ ವರ್ಣನೆಯಲ್ಲಿ ಚಿಗುರಿಡುತ್ತಿದ್ದುದು ಯಾರಿಗೂ ಸಂತೋಷದಸಂಗತಿಯೇ.

ಇಂತು ಗುಣ ವಿಶೇಷದಿಂದ ತುಂಬಿದ 'ವರ್ಧಾಯಾತ್ರೆ'ಯಲ್ಲಿ ಸಂಸ್ಕೃತ ಅವತರಣಗಳ ಕೆಲವು ತಪ್ಪುಗಳು, ಒಂದನ್ನೊಂದು ಒತ್ತಿಕ್ಕುವ ಉಪಮೆಯ ಅತಿಶಯದ ಹಳೆಯ ಕಸಬಿನ ರೀತಿಗಳೂ, ವಸ್ತುಸ್ಥಿತಿಯ ಅಲ್ಲಲ್ಲಿಯ ಅಸ್ಪಷ್ಟೋಲ್ಲೇಖಗಳು ಗಣನೆಗೆ ಬರಬಾರದ ದೋಷಗಳೆಂದು ಬಿಟ್ಟರೂ ಈ ಗ್ರಂಥದಲ್ಲಿ ಒಂದು ಮಹಾ ದೋಷವಿದೆ. 'ವರ್ಧಾಯಾತ್ರೆ' ಯನ್ನು ಓದಿದವರಿಗೆ ತೃಪ್ತಿಗಿಂತ ಅತೃಪ್ತಿಯೇ ಹೆಚ್ಚಾಗುವದು. ಲೇಖಕರು ಉದ್ದೀಪಿಸುವ ಕೌತುಕ ಕುತೂಹಲಗಳು ೧೫೦ ಪುಟದ ವೃತ್ತಾಂತದಿಂದ ಹಿಂಗತಕ್ಕುವಲ್ಲ. ಈ ದೋಷನಿವಾರಣೆಗಾಗಿ ಕೃಷ್ಣಶರ್ಮರು ಇದಕ್ಕೆ ಪೂರಕವಾದ ಚಾರಿತ್ರಿಕ ವಿಸ್ತಾರವನ್ನು ತಮ್ಮ ಪಾರದರ್ಶಕ, ದೂರದರ್ಶಕ, ಸೂಕ್ಷ್ಮದರ್ಶಕವಾದ ಶೈಲಿಯಲ್ಲಿ ಬರೆಯಲು ಕೂಡಲೆ ತೊಡಗಬೇಕೆಂದು ನಾನು ಸೂಚಿಸದೆ ಇರಲಾರೆ.

ಸಾಧನಕೇರಿ
೨೧-೧೧-೪೯

ದ. ರಾ. ಬೇಂದ್ರೆ

# ವರ್ಧಾ ಯಾತ್ರೆ

ಗುರುವಾರ, ೨೪–೧೧–೩೮.

ಬುಧವಾರ ಸಂಜೆ ೬ ಘಂಟೆಗೆ ದಾದರ್ ನಿಲುಮನೆಯಲ್ಲಿ ರೈಲು ಹತ್ತಿದ ಕೂಡಲೇ ಹಾಸಿಗೆ ಹಾಸಿ ಬಿದ್ದುಕೊಂಡವನು, ಎದ್ದು ಕಿಟಿಕಿಯಿಂದ ಹೊರಗೆ ಕತ್ತು ಚಾಚಿದಾಗ ಮುಂದೆ ಕಾಣುತ್ತಿದ್ದ ನಿಲುಮನೆಯ ಕೆಂಪು ಕೈ ಜೋತುಬಿದ್ದಿತ್ತು. ಅಸಾಧ್ಯವಾದ ಚಳಿ. ಉಣ್ಣೆಯ ಅಂಗಿ ಹಾಸಿಗೆಯಲ್ಲಿ ಸೇರಿಹೋಗಿತ್ತು. ಆದರೂ ಕುತೂಹಲದಿಂದ ನೋಡಿದೆ. ಧಾರವಾಡದ ಹಾದಿಯಲ್ಲಿ, ಕಣ್ಣಿಗೆ ಹಬ್ಬವಾಗಿ ಹಾದಿಗುಂಟ ಕಾಣುತ್ತಿದ್ದ ಬೀಗಿ ಬೆಳೆದ ಆ ಜೋಳ, ಮನೆಗೆ ಹೊಸದಾಗಿ ಬಂದ ಸೊಸೆಯಂತೆ ತಲೆಬಾಗಿ ನಿಂತ ಗೋಧಿ, ಎಲ್ಲಕ್ಕಿಂತ ಹೆಚ್ಚಾಗಿ ವಿಸ್ತಾರವಾಗಿ ವ್ಯಾಪಿಸಿದ ಮಲೆನಾಡ ಹಸುರಿನ ಮಧುರ ಗಾನ, ಯಾವುದೂ ಕಾಣಲಿಲ್ಲ. ಕನಸಿನಲ್ಲಿ ಧಿಗ್ಗನೆ ಎದ್ದಂತಾಯಿತು. ಎಲ್ಲಾ ಬೋಳು, ಬೋಳು, ಅಂದವಿಲ್ಲ, ಚಂದವಿಲ್ಲ. ಗಿಡಗಂಟೆಗಳಂತೂ ಇಲ್ಲವೇಇಲ್ಲ. ಆದೇನೋ ಒಂದು 'ಗಾಂ' ನಿಲುಮನೆಯೂ ಬಂತು. ಹತ್ತಾರು ವರ್ಷಗಳ ಕೆಳಗೆ ತಳಕಿತ್ತು ಹೋದ ಯಾವುದೋ ಗಿರಣಿಯ ಹಾಳು ಬಿದ್ದ ಕಟ್ಟಡವಂತೆ ಕಂಡು ಬಂತು ನನಗೆ. 'ಇದೇನು ಮರಾಠಿ ದೇಶವಪ್ಪಾ' ಎಂದುಕೊಂಡವನೇ ಕಿಟಕಿ ಮುಚ್ಚಿದೆ. ವರ್ಧಾ ಬರುವವರೆಗೆ ಮಲಗಿದ್ದರೆ ಚೆನ್ನಾಗಿತ್ತಲ್ಲ ಎಂದು ತೋರಿತು. ಸರಿ, ಮಲಗಿದೆ.

ಅರ್ಧಗಂಟೆಯೂ ಇಲ್ಲ. . ವರ್ಧಾದಲ್ಲಿ ಗಾಡಿ ನಿಂತಿತು. ಹಿಂದೆ ನೋಡಿದ 'ಗಾಂ' ಸಾಸುವೆಕಾಳಾದರೆ ಇದು ಕಡಲೆಕಾಳು. ಹೆಚ್ಚೇನು ಕಾಣಲಿಲ್ಲ. ಹೀಗೆನ್ನುತ್ತಿರುವಾಗಲೇ ನಸುನಗುತ್ತ ದಾಮು–ಇದರಿಗೆ

ಬಂದು ನಿಂತ. ಬೇಸಿಗೆಯ ಪಯಣದಲ್ಲಿ ಬಹುದೂರ ಬಾಯಾರಿ ನಡೆದ ಮೇಲೆ ಚಿಲುಮೆಯೊಂದು ಕಂಡಷ್ಟು ಹಿಗ್ಗು ಮನಸ್ಸಿಗೆ ಅವನನ್ನು ನೋಡಿ. ಆರುವರ್ಷಗಳ ಹಿಂದೆ ಹಾರಿ ಹೋಗಿದ್ದ ಗೆಳೆವಕ್ಕಿ. ಆ ಕೊನೆಯ ಗಳಿಗೆ ಯಲ್ಲಿ ಅವನು ಹಾಡಿದ 'ವಂದೇಮಾತರಂ' ಇನ್ನೂ ಕಿವಿಯಲ್ಲಿ ಗುಣು ಗುಣಿಸುತ್ತಿದೆ.

ಹತ್ತೇಹೆಜ್ಜೆ ದೂರದಲ್ಲಿ ಸಜ್ಜಾದ ರಿವಾಲ್ವರು (ಮ್ಯಾಜಿಸ್ಟ್ರೇಟರದು) ಎದೆಗೆ ಸರಿಯಾಗಿ ಹಿಡಿಯಲ್ಪಟ್ಟಿದೆ. ದಿವಂಗತ ಮೋತೀಲಾಲರ ದಿನವನ್ನು ಆಚರಿಸುತ್ತಿದ್ದೇವೆ. ಸಭೆಸೇರುವ ಕಾಲು ಗಂಟೆ ಮೊದಲು 'ಸಭೆ ಸೇರಿಸ ಬೇಡಿ' ಎಂದು ಸುಗ್ರೀವಾಜ್ಞೆಯಾಯಿತು. ಆ ಮೋತಿಲಾಲರ ಪುಣ್ಯ ನಾಮಸ್ಮರಣೆಯಿಂದ ಏನು ತಲೆಕೆಳಕಾಗುತ್ತಿತ್ತೋ! ಸಭೆ ಸೇರಿದ್ದುದು ಒಂದು ಗಂಜಿನಲ್ಲಿ. ಸುತ್ತಲೂ ಮನೆಗಳು. ಎರಡೂ ಕಡೆ ದೊಡ್ಡ ಬಾಗಿಲು ಗಳು. ಅವೆರಡನ್ನೂ ಪೋಲೀಸರು ಮುಚ್ಚಿ ಎರಡು ಕಡೆ ಕಾವಲುನಿಂತರು. ಅಂಗಳದಂತಿದ್ದ ಆ ಸ್ಥಳವೇ ಅಂದು ರಕ್ತ ಪ್ರವಾಹಕ್ಕೆ ಅಡ್ಡಿಯಾಯಿತು. ಇಲ್ಲದಿದ್ದರೆ ಹೈದರಾಬಾದಿನ ಈ ಆರು ವರ್ಷಗಳ ಇತಿಹಾಸ ಹೇಗಿ ರುತ್ತಿತ್ತೋ!

ಹತ್ತು ನಿಮಿಷ ಎಲ್ಲರೂ ಹೃದಯ ಪರೀಕ್ಷೆ ಮಾಡಿಕೊಂಡರು. ಸಭೆ ನೆರೆಸುವುದು ನಿಶ್ಚಯವಾಯಿತು. ಮಾತಾಡಬೇಕೆಂದು ಗೊತ್ತಾಗಿದ್ದವರು ಯಾರೂ ಬರಲಿಲ್ಲ. ಮಾಡುವುದೇನು? ನಮ್ಮಲ್ಲೇ ಯಾರಾದರೂ ಮಾತ ನಾಡಬೇಕೆಂದು ಗೊತ್ತುಮಾಡಿಕೊಂಡೆವು. ಅದು ನನ್ನ ಪಾಲಿಗೆ ಬಂದಿತು. ಉಕ್ಕಿ ಬರುವ ಭೀರುತ್ವವನ್ನು ನುಂಗಿ ನಾಲ್ಕೇಮಾತು ಆಡಿ ಮುಗಿಸಿದೆ. ಕಣ್ಣೆದಿರು ಸಾವಿರಮಿಂಚು ಥಳಥಳಿಸಿ ಹೋದವು. ದಾಮು ಆ ದಿನದ ಅಧ್ಯಕ್ಷ. ಎದ್ದು ನಿಂತು ಉಚ್ಚಸ್ವರದಲ್ಲಿ 'ವಂದೇ ಮಾತರಂ' ಹಾಡಿ ಸಭೆ ಯನ್ನು ಮುಗಿಸಿದ. ಮಾರನೆಯ ದಿನವೇ ಅವನು ದೇಶ ಬಿಡಬೇಕಾಯಿತು; ಗಡೀಪಾರು. ಆದಿನ ಅದೇಕೋ ನನ್ನ ಸರದಿ ಬರಲಿಲ್ಲ. ಈಗ ಆರು ವರುಷ ಗಳ ಮೇಲೆ ಆ ಸರದಿ ಬಂದಿದೆ. ಆ ಚಿತ್ರವೆಲ್ಲಾ ಮೂಡಿ ಬಂತು ಮತ್ತೆ.

'ಈದಿನ ಜವಾಹರಲಾಲರು ಊರಿಗೆ ಹೋಗುತ್ತಾರೆ. ಅತ್ತ ಕಡೆ ಪ್ಲಾಟ್‌ಫಾರಂಗೆ ಹೋಗೋಣ ನಡೆ' ಎಂದ ಗೆಳೆಯ. ಶೃತಿಮಾಡಿದ

ವೀಣೆಯನ್ನು ಮೀಟಿದಂತಾಯಿತು. ಆ ನೆನಪಿನಿಂದ ಈ ನೋಟಕ್ಕೆ ಹಾರುವುದು ಕಷ್ಟವಾಗಲಿಲ್ಲ. ನಿಂತಲ್ಲೇ ಸಾಮಾನು ಬಿಟ್ಟು ಅತ್ತ ಹೋದೆವು.

ಪಶ್ಚಿಮ ಖಂಡದ ಪ್ರವಾಸವನ್ನು ಮುಗಿಸಿಕೊಂಡು ಆದೇ ಬಂದಿದ್ದರು ಜವಾಹರಲಾಲರು ಹಿಂದುಸ್ತಾನಕ್ಕೆ. ಜೊತೆಯಲ್ಲಿ ಮಗಳು ಪ್ರಿಯದರ್ಶಿನಿ-ಇಂದಿರಾ ಇದ್ದಳು. ಎಂದಿನಂತೆ ಖಾದೀವೇಷ. ಚಳಿಯಾಗುತ್ತಿದ್ದುದರಿಂದ ಒಂದು ಹಗುರಾದ ಶಾಲು-ಕಂಬಳಿ. ಜವಾಹರಲಾಲರು ಮಾತನಾಡುತ್ತ ನಿಂತಿದ್ದರು. ಇದಿರಿನಲ್ಲಿ ವಿಶಾಲದೇಹಿಯಾದ ಜಮುನಾಲಾಲ ಬಜಾಜರು, ಮಗ್ಗುಲಿಗೆ ಕೃಪಾಲಾನಿ. ನಮಸ್ಕಾರ ಮಾಡಿದ್ದಾಯಿತು. ಪರಿಚಯವಿಲ್ಲದವರ ಪರಿಚಯವೂ ಆಯಿತು. ಹೈದರಾಬಾದಿನ ಪ್ರಭುತ್ವದ ಕೃಪೆಯಿಂದ ಪರಿಚಯಕ್ಕೆ ಬಣ್ಣ ಬಂತು.

'ಹೇಗಿದೆ ನಿಮ್ಮ ಹೈದರಾಬಾದಿನಲ್ಲಿ? ಅಂಧೇರ್ ನಗರಿ ನಿಮ್ಮದು. ಏನು ಮಾಡುತ್ತೀರೋ ಏನೋ' ಎಂದರು ಜವಾಹರಲಾಲರು.

'ಅವರೇನು ಮಾಡೋದು! ಊರಿಗೆಲ್ಲ ಕೆಟ್ಟಬುದ್ಧಿ ಕಲಿಸಿ, ಅಡ್ಡಹಾದಿ ಹಿಡಿಸಿ. ಈಗ ನಿಮ್ಮದು ಅಂಧೇರಿ ಅಂದರೆ ಯಾರು ಕೇಳುತ್ತಾರೆ? ಇರಲಿ. ಮತ್ತೆ ಬಂದಾಗ ನಿಮ್ಮ ಪುರಾಣ ಆಗಲಿ. ಈಗ ಮನೆಗೆ ಹೋಗಲಿ, ರೈಲು ಪ್ರಯಾಣ ದಣಿವಿನದು' ಎಂದರು ಬಜಾಜರು.

ಹತ್ತು ಮೊಳ ಹತ್ತಿರ ನಿಂತು ಎಂದೂ ನಾನು ಬಜಾಜರನ್ನು ನೋಡಿರಲಿಲ್ಲ. ಸಭೆಗಳಲ್ಲಿ ನೋಡಿದ್ದಷ್ಟೇ. ಹಸ್ತಾಕ್ಷರಗಳ ಬೇಟೆಯಾಡಿ, ಹೂವಿನ ಹಾರಗಳನ್ನು ತೊಡಿಸಿ, 'ವೀರ ಪೂಜೆ' ಮಾಡುವ ಜನರ ಗುಂಪಿಗೆ ನಾನು ಎಂದೂ ಸೇರಿರಲಿಲ್ಲ.

ಈ ಆದರದ ಮಾತು ಕೇಳಿ ಮತ್ತೊಮ್ಮೆ ಬಜಾಜರ ಮೂರ್ತಿಯನ್ನು ದೃಷ್ಟಿಸಿ ನೋಡದೆ ಇರಲಾಗಲಿಲ್ಲ.

* * * *

'ಗೆಟ್ ಔಟ್, ಚಲೊ'

ಗಾಡಿಯವನಿಗೆ ದಾಮು ಹೇಳಿದ ಮಾತು ಅದು. ಕೇಳಿ ಸ್ವಲ್ಪ ಅಪ್ರತಿಭನಾದೆ. ಆದರೂ ಅದನ್ನು ತೋರಗೊಡದೆ ಬೇರೆ ಮಾತು ಬೆಳೆಸಿದೆ.

ಊರಿನ ನಡುವೆ ಹರಿದು ೧೦ ನಿಮಿಷದಲ್ಲಿ ಗಾಡಿ ಊರ ಹೊರಗಿನ ಒಂದು ಸಣ್ಣ ಬಂಗಲೆಯ ಮುಂದೆ ನಿಂತಿತು. ಟಾಂಗಾದಲ್ಲಿದ್ದ ಅರಿವೆಯೆಲ್ಲಾ ಬಿಳೀ ಖಾದಿ, ಮೆತ್ತೆ ಕೂಡ ಖಾದಿಯೇ. ವರ್ಧಾದಲ್ಲಿ ಅರ್ಧಕ್ಕರ್ಧ ಟಾಂಗಾಗಳಲ್ಲಿ ಬರೀ ಖಾದಿಯೇ ಕಂಡು ಬರುತ್ತವೆ. ಒಬ್ಬರಿಬ್ಬರು ಪೂರಾ 'ಖಾದೀ ವಾಲಾ'ಗಳೇ ಇದ್ದಾರೆ. ಖಾದಿ ಕ್ರಮೇಣ ತುಟ್ಟಿಯಾಗದಿದ್ದರೆ ಇನ್ನೂ ಹೆಚ್ಚು ಜನ ಸಿಗುತ್ತಿದ್ದರೋ ಏನೋ. ನೂಲುವ ಕೈಗಳಿಗೆ ನಾಲ್ಕು ಹಣ ಹೆಚ್ಚು ಕೊಡುವ ಭಾಗ್ಯ ಈ ಒಡಪಾಯಿಗಳಿಗೆಲ್ಲಿ ಬರಬೇಕು.

ಸಾಮಾನು ತೆಗೆಸಿಕೊಂಡು ಒಳಕ್ಕೆ ಹೋದೆವು. ಮನೆ ಸಣ್ಣದು. ಸಾಧಾರಣವಾದ ಹತ್ತು ಕೋಣೆಗಳು. ಮಹಡಿಯ ಮೇಲೆ ಎರಡು, ಕೆಳಗೆ ಎಂಟು. ನಡುವೆ ಚೌಕವಾದ ಅಂಗಳ. ಅಂಗಳದಲ್ಲಿ ಹೊಲಸು ಹುಡುಕಿದರೂ ಸಿಗುವಹಾಗಿಲ್ಲ. ಅಷ್ಟು ಚೊಕ್ಕಟ. ಆದರೆ ನೆಲ ಪೂರಾ ಮರಳು, ಹರಳು. ಬರಿಗಾಲಿನಿಂದ ಓಡಾಡುವುದು ನನಗೇನೂ ಹೊಸದಲ್ಲ. ಆದರೂ ಹೈದರಾಬಾದಿನಲ್ಲಿ ನಯವಾದ ಸಿಮೆಂಟು ರಸ್ತೆಗಳಲ್ಲಿ ಓಡಾಡಿದ ಕಾಲು. ರಸ್ತೆಯಲ್ಲಿದ್ದರೂ ಮನೆಯಲ್ಲಿದ್ದ ಹಾಗೇ ಇರುತ್ತಿತ್ತು. ಈ ಮರಳನ್ನು ನೋಡಿ ಕಾಲಿಗೆ ಸ್ವಲ್ಪ ಗಾಬರಿಯೇ ಆಯಿತು. ಕಾಲಿನ ಕಡೆ ನೋಡಿದೆ. ಪಾದರಕ್ಷೆ ಇನ್ನೂ ಕಾಲಿನಲ್ಲೇ ಇತ್ತು. ಪಾದರಕ್ಷೆ ಎಂದು ಹೆಸರಿಟ್ಟವರು ಇಂಥ ಫಜೀತಿಗೆ ಸಿಕ್ಕಿಕೊಂಡವರೇ ಆಗಿರಬೇಕು. ಆ ಪುಣ್ಯಾತ್ಮ ಇಡದೆ ಹೋಗಿದ್ದರೆ ಈ ಹೊತ್ತು ಚಪ್ಪಲಿಗೆ ನಾನೇ ಆ ಹೆಸರು ಇಡಬಹುದಾದ ಸಂದರ್ಭವೇ ಸರಿ.

ಈ ಅತಿಥಿ ಭವನಕ್ಕೆ ಗೆಸ್ಟ್ ಹೌಸ್ ಎಂದು ಏಕೆ ಹೆಸರಿಟ್ಟರೋ! ಹಿಂದೀ ಸಮುದ್ರದಲ್ಲಿ ತೇಲಿ ನಿಂತಿರುವ ಬಜಾಜರ ಈ ಬಂಗಲೆಗೆ ಇಂಗ್ಲೀಷು ಹೆಸರು ಹೇಗೆ ಬಂತೋ, ಬಂದರೂ ಹೇಗೆ ಉಳಿದುಕೊಂಡಿತೋ ಗೊತ್ತಾಗದ ತೊಡಕಾಗಿದೆ. ವಿದೇಶದಿಂದ ಗಾಂಧಿಜಿಯನ್ನು ಕಾಣಲು ಬರುವ ಗೆಳೆಯರಿಗೆ, ಯಾತ್ರಾರ್ಥಿಗಳಿಗೆ ತಿಳಿಯಲು ಸುಗಮವಾಗಿರಲಿ ಎಂದಿರಬಹುದೇನೋ. ಸರಿ. ಅತಿಥಿಭವನದ ಮಗ್ಗುಲಲ್ಲಿ ಹೊಂದಿಕೊಂಡು ದೂರವಾಗಿ ಒಂದೆರಡು ಮನೆಗಳಿವೆ. ಒಂದು ಗಾಂಧೀ ಸೇವಾಸಂಘದ ಕಾರ್ಯಾಲಯ, ಇನ್ನೊಂದು ಬಜಾಜರ ಮಕ್ಕಳ ಕ್ರೀಡಾಂಗಣ—ಘನಚಕ್ರ

ಕ್ಲಬ್. ಮೂರನೆಯದು ಅವರ ಬಳಗದವರ ವಾಸದ ಮನೆ. ಇದೇ ಬಜಾಜವಾಡಿ. ಈ ಮನೆಗಳನ್ನು ಬಿಟ್ಟರೆ ಅರ್ಧ ಮೈಲಿನವರೆಗೂ ಎಲ್ಲಾ ಬಯಲು.

ಅಲ್ಲಿಂದಾಚೆಗೆ ನವಭಾರತ ವಿದ್ಯಾಲಯ, ಹಿಂದೀ ಪ್ರಚಾರ ಸಮಿತಿಯ ಕಚೇರಿ, ಮಹಿಲಾಶ್ರಮ, ಅದರ ಕೆಲಸಗಾರರ ಮನೆಗಳು.

ಹತ್ತು ಹತ್ತು ಗೇಣಿಗೆ ಒಂದು ಕೋಣೆ, ಸಾಲಾಗಿ ಇಟ್ಟ ಪೆಟ್ಟಿಗೆಗಳಂಥ ಗೂಡುಗಳು—ಹೀಗೆ ಪಟ್ಟಣದಲ್ಲಿ ಜೀವನ ಕಳೆದ ಮನಸ್ಸಿಗೆ ಈ ವಿಶಾಲವಾದ ಬಯಲು, ಆ ಸ್ವಚ್ಛವಾದ ಮನೆ, ಒಂದು ಹೊಸ ಆನಂದವನ್ನು ತೋರಿದವು.

ಈ ಇಂಗ್ಲೀಷು ಗೆಸ್ಟ್ ಹೌಸಿಗೆ ಬಂದ ಹಿಂದೀ ತದ್ಭವದ ಅವಸ್ಥೆ ಗೆಟ್ ಔಟ್. ಟಾಂಗಾದವರು ಮಾಡಿದ ಹಿಂದೀ ನಾಮಕರಣ. ಛಳಿಯಲ್ಲಿ ಕೈಕಾಲೆಲ್ಲ ಹಿಮದಂತೆ ಉಂಡೆಗಟ್ಟಿತ್ತು. ಸಾಮಾನು ಇಳಿಸಿದವನೇ ಕವಡೂಭಾಯಿ ಬಿಸಿ ಬಿಸಿ ನೀರು ತಂದು ಮುಖತೊಳೆಯಲು. ಸ್ವರ್ಗವೇ ಸಿಕ್ಕಹಾಗಾಯಿತು. ಆ ಬಿಸಿ ನೀರು ಕೈಕಾಲು ಮುಖದ ಮೇಲೆ ಹರಿದು ಒಳಗೆ ಸ್ವಲ್ಪ ರಕ್ತ ಹರಿಯಲು ಮಾರ್ಗವಾಯಿತು.

ಕವಡೂಭಾಯಿ ಎಂದೆನಲ್ಲ. ಕವಡೂ ಅತಿಥಿಭವನದ ಕಾರ್ಯಕರ್ತ; ಪಾರುಪತ್ಯಗಾರ. ಅಲ್ಲಿಗೆ ಬಂದು ಹೋಗುವ ಜನರ ಸುಖಸತ್ಕಾರದ ತಿರುಗಣಿ ಅವನ ಕೈಯಲ್ಲಿದೆ. ಅತಿಥಿಗಳ ಆದರಾತಿಥ್ಯ ಅವನಿಗೆ ಸೇರಿದುದು. ಎಲ್ಲವನ್ನೂ ಅಣಿಮಾಡುವ ಕೆಲಸ ಅವನದು.

ಬೇರೆ ಸ್ಥಳಗಳಲ್ಲಿ ಕವಡೂ 'ಬಾಯ್' (Boy) ಆಗಬೇಕು. ಆದರೆ ಬಜಾಜವಾಡಿಯ ಅತಿಥಿಭವನದಲ್ಲಿ ಮಾತ್ರ ಕವಡೂ-ಭಾಯಿ ಆಗಿದಾನೆ. ಅಲ್ಲಿನ ಸಂಸ್ಕೃತಿಗೆ ಇದು ಒಂದು ಸೂತ್ರ; ಒಂದು ನಿದರ್ಶನ.



# ಬಜಾಜವಾಡಿ

ಮಧ್ಯಾಹ್ನ ೧೧ ಗಂಟೆಗೆ ಇಂಪಾಗಿ ದೇವಾಲಯದ ಘಂಟಾನಾದವೊಂದು ಕೇಳಿಬಂತು. ಮಹಡಿಯ ಮೇಲಿನ ಕೋಡಿಯಲ್ಲಿ ತಂಗಿದ್ದ ದೀನಬಂಧು ಆಂಡ್ರೂಸರು ದಡದಡನೆ ಇಳಿದು ಬಂದರು. ಬಚ್ಚಲುಮನೆಗೆ ಹೋಗುತ್ತಿದ್ದರೆಂದು ಕಾಣುತ್ತದೆ. ನನ್ನನ್ನು ಕರೆದರು. "ಇಲ್ಲಿ ನೋಡು, ಹೈದರಾಬಾಡ್. ನಾನು ಇದೇ ಸೇವಾಗ್ರಾಮದಿಂದ ಬಂದಿದ್ದೇನೆ. ಸ್ವಲ್ಪ ತಡವಾಗುತ್ತದೆ. ಸೇಠಜೀಗೆ ಹೇಳಬೇಕು" ಎಂದರು.

ನನ್ನ ಮುಖದಲ್ಲಿ ಅರ್ಥವಾಗದ ಒಂದು ತೊಡಕಿನ ಗೆರೆಗಳು ಕಾಣುತ್ತಿದ್ದವು. ಆಂಡ್ರೂಸರಿಗೆ ಅದು ತಿಳಿಯಿತು; ಹೇಳಿದರು. "ಈಗ ಕೇಳಿದ ಗಂಟೆ ಊಟದ ಗಂಟೆ. ದಿನವೂ ೧೧ಕ್ಕೆ ಸೇಠಜಿಯವರ ಆ ಬಂಗಲೆಯಲ್ಲಿ ಈ ಹೊತ್ತಿಗೆ ಸರಿಯಾಗಿ ಅತಿಥಿಗಳಿಗೆಲ್ಲ ಊಟ. ಎಲ್ಲರೊಡನೆ ಕುಳಿತು ಊಟ ಮಾಡಲು ಸೇಠಜಿಗೆ ಬಹಳ ಸಂತೋಷ. ಹೋಗು. ಬೇಗ ಹೋಗು. ತಡಮಾಡುವವರನ್ನು ಕಂಡರೆ ಅವರಿಗೆ ಸೇರುವುದಿಲ್ಲ".

ಅಷ್ಟರಲ್ಲಿ ಕವಡೂಭಾಯಿ ಬಂದ. "ಸೇಠಜೀ ಕರೆಯುತ್ತಾರೆ ನಿಮ್ಮನ್ನು" ಎಂದ. ದಿನವೂ ಹತ್ತಾರು ಜನ ಬಂದು ಹೋಗುವ ಅತಿಥಿಗಳು. ಒಮ್ಮೊಮ್ಮೆ ಊಟಕ್ಕೆ ಕೂತಾಗ ೫೦ರ ಮೇಲೆ ಎಲೆ ಹಾಕಿರುತ್ತಾರೆ. ಆದರೂ ಅತಿಥಿಗಳಲ್ಲಿ ಪ್ರತಿಯೊಬ್ಬರನ್ನೂ ಅವರು ನೆನಪಿಟ್ಟುಕೊಳ್ಳುತ್ತಾರೆ. ಎಲ್ಲರ ಅನುಕೂಲ್ಯವನ್ನೂ ವಿಚಾರಿಸಿಕೊಳ್ಳುತ್ತಾರೆ. ಆ ಶಾಂತತೆ, ಅಭಿಮಾನಗಳನ್ನು ಕಂಡು ಮರೆಯುವುದು ಬಹಳ ಕಷ್ಟ.

ಜಮುನಾಲಾಲರು ವಾಸವಾಗಿರುವ ಬಂಗಲೆ ಗೆಸ್ಟ್‌ಹೌಸಿಗೆ ಹತ್ತಿರದಲ್ಲೇ ಇದೆ. ಊರಿನಲ್ಲಿ ಜಮುನಾಲಾಲರ ಮನೆ ಒಂದು ಅಗ್ರಹಾರ. ವಿಶಾಲವಾದ ಮನೆ. ಆದರ ಅಂಗಳವೇ ಆ ಊರಿನ ಗಾಂಧೀ ಚೌಕ. ಎಲ್ಲ ಉಪನ್ಯಾಸಗಳೂ, ಎಲ್ಲ ಸಮಾರಂಭಗಳೂ ಅಲ್ಲೇ ನಡೆಯಬೇಕು. ಈ ಮಹಲಿನ ಒಂದು ಮಗ್ಗುಲಿಗೆ ಲಕ್ಷಗಟ್ಟಲೆ ರೂಪಾಯಿ ವೆಚ್ಚಮಾಡಿ ಜಮನಾ

ಲಾಲರ ಪೂರ್ವಜರು ಕಟ್ಟಿಸಿದ ಲಕ್ಷ್ಮೀನಾರಾಯಣ ದೇವಾಲಯವಿದೆ. ಅದರಲ್ಲಿ ಜಾತಿಮತವರ್ಣಭೇದವಿಲ್ಲದೆ ಎಲ್ಲರಿಗೂ, ಹರಿಜನರಿಗೂ, ಪ್ರವೇಶವನ್ನುಂಟುಮಾಡಿದರು ಜಮುನಾಲಾಲರು. ಮಾರವಾಡಿ ಸನಾತನಿಗಳ ಶಾಪವನ್ನು ಇದರಿಂದ ತಲೆಯ ಮೇಲೆ ಎರಚಿಕೊಂಡರು. ಸತ್ಯಕ್ಕಾಗಿ, ಪುರೋಗಾಮಿತ್ವಕ್ಕಾಗಿ ಇವರು ಕೊಟ್ಟ ಕಾಣಿಕೆ ಬಹಳ ಹೆಚ್ಚಿನದು.

ಇನ್ನೊಂದು ಮಗ್ಗುಲಿಗೆ ಖಾದೀ ವಸ್ತ್ರಾಲಯ, ಹಿಂದೀ ಪುಸ್ತಕಾಲಯ, ಕಾಂಗ್ರೆಸ್ ಕಾರ್ಯಾಲಯ ಇವೆ. ಕನ್ಯಾಶಾಲೆಯೂ ಅಲ್ಲೇ.

ಆದರೆ ಬಜಾಜರು ಊರೊಳಗಿನ ಮನೆಯಲ್ಲಿ ಈಗ ವಾಸಮಾಡುವುದಿಲ್ಲ. ಅವರ ಕುಟುಂಬವೆಲ್ಲ ಅಲ್ಲಿವೆ. ಇವರು ಮಾತ್ರ ಊರ ಹೊರಗಿನ ಬಂಗಲೆಯಲ್ಲಿ ಇರುತ್ತಾರೆ. ಇವರ ಜೊತೆಗೆ ೧೭–೧೮ ವರ್ಷದ ಇವರ ಕಿರಿಯ ಮಗಳು ಓಂಬಾಯಿ—ಉಮಾಬಾಯಿ.

ಈ ಬಂಗಲೆಯ ಮೇಲೆ ತ್ರಿವರ್ಣ ಧ್ವಜ ಸದಾ ಹಾರುತ್ತಿರುತ್ತದೆ. ಮಹಾತ್ಮರಿಂದಲೇ ಆ ಧ್ವಜ ಅಲ್ಲಿ ಏರಿಸಲ್ಪಟ್ಟಿತಂತೆ. ಅದಕ್ಕೆ ಯಾವ ಆತಂಕವೂ ಇಲ್ಲ. ಈ ಬಂಗಲೆಗೂ ಮಹಡಿಯಿದೆ. ಮಹಡಿಯ ಮೇಲಿನ ಎರಡು ಕೋಣೆಗಳಲ್ಲಿ ಒಂದು ನೆಹರೂ ಕೊಠಡಿ! ಅದರ ಹೆಸರೇ ಹಾಗೆ. ಪಂಡಿತ ಜವಾಹರಲಾಲರು ವರ್ಧಾಕ್ಕೆ ಬಂದಾಗೆಲ್ಲ ಅಲ್ಲೇ ತಂಗುತ್ತಾರೆ ಬೇರೆ ಯಾವ ಕೊಠಡಿಯಲ್ಲೂ ಅವರು ಇರುವುದಿಲ್ಲ. ಹೀಗಾಗಿ ಅದಕ್ಕೆ ಆ ಹೆಸರೇ ಬಿದ್ದಿದೆ. ಅತಿಥಿ ಭವನದಲ್ಲೂ ಇಷ್ಟೇ. ನಾಯಕರ ಕೊಠಡಿಗಳು ಅವರವರ ಹೆಸರಿನಲ್ಲಿ ಮೀಸಲಾಗಿವೆ. ಇದು ಎಲ್ಲರಿಗೂ ತಿಳಿಯುವಷ್ಟು ಪ್ರಕಟವಾಗಿಲ್ಲ. ಅಲ್ಲಿನ ಕೆಲಸಗಾರರಿಗೂ ನಾಯಕರಿಗೂ ಮಾತ್ರ ಇದು ಗೊತ್ತು.

ಬಂಗಲೆಯಲ್ಲಿ ಮುಂದೆ ಕಾಣುವುದು ವರಾಂಡಾ. ಅದರ ಎರಡೂ ಮಗ್ಗುಲಿನಲ್ಲಿ ಕೋಣೆಗಳ ಸಾಲುಗಳಿವೆ. ಬಲ ಮಗ್ಗುಲಿನ ಕೋಣೆ ಓಂಬಾಯಿಯ ಅಭ್ಯಾಸ ಗೃಹ. ಆ ಸಾಲಿನ ಕೋಣೆಗಳು ಆಕೆಯ ಗೆಳೆಯರಿಗೆ ಅತಿಥಿಗಳಿಗೆ. ಎಡಮಗ್ಗುಲಿನ ಕೋಣೆ ಜಮುನಾಲಾಲರದು. ಅದರಲ್ಲಿ ಒಂದು ಹಲಗೆಯ ಮಂಚ, ಒಂದು ಗಡಿಯಾರ, ಎರಡು ಪಟ. ಒಂದು

ಗಾಂಧೀಜೀ. ಇನ್ನೊಂದು ವಿನೋಬಾ. ಮಂಚದ ಮೇಲೆ ಮೆತ್ತೆ ಕೂಡ ಇಲ್ಲ. ಕೆಳಗೆ ಮಾರವಾಡೀ ರೀತಿಯ ಹಾಸುಮೆತ್ತೆ, ಒರಗು ದಿಂಬುಗಳು, ಇಷ್ಟೆ. ಸೇಠಜಿಯ ಸರಳ ಜೀವನ ಸಾಧಾರಣ ಜನರ ಹಿಡಿತಕ್ಕೆ ಮೀರಿದ್ದು.

ನಾನು ವರ್ಧಾದಲ್ಲಿದ್ದಾಗ ಕಾಂಗ್ರೆಸಿನ ವರ್ಕಿಂಗ್ ಕಮಿಟಿಯೊಂದು ನಡೆಯಿತು. ಊಟದ ಹೊತ್ತಿನಲ್ಲಿ ಎಲೆ ೭೦ಕ್ಕೆ ಏರಿದವು. ಹೈದರಾಬಾದಿನವರು ಹತ್ತು ಮಂದಿ, ಮಧ್ಯ ಭಾರತ ಸೊಹಾವಲಿನವರು ನಾಲ್ಕು, ಮೇವಾಡದವರು, ಜಯುಪುರದವರು, ತಿರ ವಾಂಕೂರಿನವರು, ರಾಜನಂದ ಗಾಂವ—ದೇಶೀ ಸಂಸ್ಥಾನಗಳ ಜನರದೊಂದು ಜಾತ್ರೆಯೇ ನೆರೆದಿತ್ತು. ಛಳಿಗಾಲ. ಹಾಗೇ ವರಾಂಡದಲ್ಲಿ ಮೂರು ದಿನ ಬರೀ ಜಮಖಾನದ ಮೇಲೆ ಮಲಗಿದ್ದರು.

ಬಜಾಜವಾಡಿಯ ಈ ಬಂಗಲೆ ಅವರಿಗೆ ಪ್ರೀತಿಯದು.

ಇಂದು ಇದನ್ನು ಬರೆಯುವಾಗ ಅದೇ ಬಜಾಜವಾಡಿಯ ಅತಿಥಿ ಭವನದಲ್ಲಿ ಇದ್ದೇನೆ. ಈಗ ಇಲ್ಲಿ ಆ ಗಲಿಬಿಲಿಯಿಲ್ಲ, ಸಂಭ್ರಮವಿಲ್ಲ. ಮಹಿಳಾ ವಿದ್ಯಾಲಯದ ಹುಡುಗಿಯರು ದಿನವೂ ಬಂದು ಸೇಠಜಿಯ ಮಗಳ ಜತೆಯಲ್ಲಿ ನಲಿಯುತ್ತ ನಗುತ್ತ ಕಾಲ ಕಳೆಯುತ್ತಿದ್ದರು. ಆ ನಗೆ ಈಗ ಕಾಣಬರುವುದಿಲ್ಲ.

ಜಮನಾಲಾಲರು ಇಂದು ಜಯಪುರದ ಸೆರೆಮನೆಯಲ್ಲಿ ಕೊಳೆಯುತ್ತಿದ್ದಾರೆ. ಬಜಾಜವಾಡಿಯ ಬಂಗಲೆಗೆ ಬೀಗ ಹಾಕಿದೆ. ಮೇಲೆ ತ್ರಿವರ್ಣ ಧ್ವಜ ಹಾರಾಡುತ್ತಲೇನೋ ಇದೆ. ಅದರಲ್ಲಿ ಮೊದಲಿದ್ದ ಜೀವ ಕಾಣಬರುವುದಿಲ್ಲ. ಮೊದಲಿನಂತೆ ಗಾಳಿಯೊಡನೆ ಅದು ಸರಸವಾಡುತ್ತಿಲ್ಲ. ಸ್ತಬ್ಧತೆಯನ್ನು ಕಲಿತಿದೆ.

* * * *

ಊಟಕ್ಕೆ ಕೂತಾಗ ನೋಡುತ್ತೇನೆ. ಮಗ್ಗುಲಿಗೆ ಶಂಕರಲಾಲ ಬ್ಯಾಂಕರರು, ಇದಿರಿಗೆ ಡಾಕ್ಟರ್ ಪಟ್ಟಾಭಿ. ಶಂಕರಲಾಲರನ್ನು ೧೧ ವರ್ಷಗಳ ಹಿಂದೆ ಬೆಂಗಳೂರಿನಲ್ಲಿ ನೋಡಿದ್ದು. ಈಗ ಹಲ್ಲು ಬಿದ್ದು ಹೋಗಿವೆ. ಆದರೂ ಹುಡುಗಾಟದ ಸ್ವಭಾವ ಮಾತ್ರ ಬದಲಾಗಿಲ್ಲ. ಊಟದ ಹೊತ್ತಿನಲ್ಲಿ ಶಂಕರಲಾಲರಿದ್ದರೆ ಸಾಕು, ಎಲ್ಲರಿಗೂ ಹೊಟ್ಟೆ ತುಂಬಿ ಒಡೆದ್ಯ

ಹೋಗುತ್ತದೆ. ಅವರ ನಗೆಮಾತು ಊಟಕ್ಕೆ ಉಪ್ಪಿನಕಾಯಿಂತೆ. ಜಮು ನಾಲಾಲರನ್ನು ಪೀಡಿಸುವುದರಲ್ಲಿ ಅವರಿಗೆ ಬಹಳ ಸಂತೋಷ. ಸರದಾರ ಪಟೇಲರು ಇವರ ಜತೆಗೆ ಸೇರಿದರೆ ಸೇಠಜಿಗೆ ಆ ದಿನ ನಾಗೋಲಿಯಿದ್ದ ಹಾಗೆ. ಸಾಲದ್ದಕ್ಕೆ ಕೃಪಲಾನಿಯೊಬ್ಬರು ಸಿಕ್ಕರೆ ಈ ತ್ರಿಮೂರ್ತಿಗಳ "ಥಾಂಥಲಿ"ಗೆ ಜಮುನಲಾಲರ ಶಾಂತ ಸ್ವಭಾವವಿಲ್ಲದ ಬೇರೆ ಯಾರಿಗೂ ದಿಕ್ಕು ತೋರದಂತಾಗಬೇಕು. ಸೇಠಜಿ ಮಾತ್ರ ನಗುತ್ತಲೇ ಉತ್ತರ ಹೇಳುತ್ತಾರೆ.

ಊಟದಲ್ಲಿ ಸೇಠಜಿಯ ಉದಾತ್ತ ಸ್ವಭಾವ ಸ್ಪಷ್ಟವಾಗುತ್ತದೆ, ಎಲ್ಲರೊಡನೆಯೇ ಕುಳಿತುಕೊಳ್ಳುತ್ತಾರೆ. ಎಲ್ಲರಿಗೂ ಬಡಿಸಿದುದನ್ನೇ ತಾವು ಉಣ್ಣುತ್ತಾರೆ. ಹಾಗೆನ್ನುವದಕ್ಕಿಂತ, ತಮಗೆ ಬಡಿಸಿದುದನ್ನೇ ಎಲ್ಲರಿಗೂ ಬಡಿಸುವ ವ್ಯವಸ್ಥೆ ಮಾಡಿದ್ದಾರೆ ಎಂದರೆ ಸಲ್ಲುತ್ತದೆ. ಊಟ ಸಾದಾ. ಸ್ವಚ್ಛತೆ ಬಹಳ.

ಈ ಆದರಾತಿಥ್ಯದ ಖಾತೆಗೆ ವರ್ಷಕ್ಕೆ ೨೦ ಸಾವಿರ ರೂಪಾಯಿ ವೆಚ್ಚವಾಗುತ್ತಿದೆಯೆಂದು ಅವರ ಕಾರ್ಯಾಲಯದ ಲೆಕ್ಕಗಳನ್ನು ನೋಡಿ ತಿಳಿದುಕೊಂಡೆ. ನಮ್ಮ ದೇವಾಲಯಗಳ ಸಮಾರಾಧನೆಗಳು, ಪ್ರಸಾದಗಳ ನೆನಪಾಯಿತು.

ಈ ಗಾಂಧೀ ಮಠದ ಮಹಂತರಿಗೆ ಮನಸಿನಲ್ಲೇ ನಮಸ್ಕಾರ ಹಾಕಿದೆ.

ಆಂಡ್ರೂಸರಿಗಾಗಿ ಮೂಲೆಯಲ್ಲಿ ಸ್ಥಳ ಬಿಟ್ಟು ಊಟಕ್ಕೆ ಕೂತೆವು. ಮಹಾರಾಷ್ಟ್ರ-ಗುಜರಾತೀ ಪದ್ಧತಿಯ ಬೆರಿಕೆಯದು ಭೋಜನ. ಜೋಳದ ರೊಟ್ಟಿ-ಗೋಧಿಯ ಚಪಾತಿಗಳೇ ಮುಖ್ಯ ಆಹಾರ. ಖಾರ ಇಲ್ಲವೇನೋ ಅನಿಸುವಷ್ಟು ಕಡಿಮೆ. ಬಡಿಸಲು ಬಜಾಜರ ಮಗಳೇ ಮೊದಲಿಗಳು.

ಊಟಕ್ಕೆ ಮೊದಲು ಉಪನಿಷತ್ಪಠನವಾಗುತ್ತದೆ. ಶಾಂತಿಪಾಠವಾಗುತ್ತದೆ. ಆ ಗಂಭೀರತೆಯನ್ನು ನೋಡಿದರೆ ಕಿರಿಸ್ತಾನರ ಊಟಕ್ಕೆ ಮೊದಲು ನಡೆಯುವ ಪ್ರಾರ್ಥನೆ ನೆನಪಾಗುತ್ತದೆ. ಬಹುಶಃ ಆ ಪದ್ಧತಿಯನ್ನೇ ಅನುಕರಿಸಿರಬೇಕು.

ಮದರಾಸಿನ ಕಡೆಯ ಅತಿಥಿಗಳಿಗೆ ಮಾತ್ರ ಈ ಸಮಾರಾಧನೆಯಲ್ಲಿ ಬಹಳ ಇಕ್ಕಟ್ಟಾಗುತ್ತದೆ. ಮೊದಲಿಂದ ಕೊನೆಯವರೆಗೆ ಅನ್ನ ತಿನ್ನುವ

ಜನ ಇವರು. ಈ ಪಙ್ಕ್ತಿಯಲ್ಲಿ ಅನ್ನಕ್ಕಾಗಿ ಕಾದು ಕೂತರೆ ಎರಡನೆಯ ಪಙ್ಕ್ತಿಗೆ ಕೂತಷ್ಟೇ ಆಗುತ್ತದೆ. ಮೊದಲು ಚಪಾತಿಯ ಸೇವೆ. ಒಂದು ರಾಶಿ ಧ್ವಂಸವಾಗಬೇಕು. ಆ ಮೇಲೆ ಅನ್ನರಾಜರ ಪ್ರವೇಶ. ಸೇಠಜಿಗೆ ಈ ವಿಷಯದಲ್ಲಿ ಬಹಳ ಎಚ್ಚರಿಕೆ. ಕರ್ನಾಟಕರು ನಾವು ಸ್ವಲ್ಪ ಮಟ್ಟಿಗೆ ರೊಟ್ಟಿ ತಿನ್ನುವುದನ್ನು ಬಲ್ಲೆವು. ಕರ್ನಾಟಕ ಸಾಹಿತ್ಯ ಸಮ್ಮೇಳನಗಳಿಂದ, ಏಕೀಕರಣ ಚಳುವಳಿಗಳಿಂದ "ಭಕ್ರಿ, ಚಪಾತಿ, ದಶಮಿ"ಗಳು ಕನ್ನಡ ನಾಡಿಗೆಲ್ಲಾ ಪರಿಚಿತವಾಗಿವೆ ಆದರೆ ಆಂಧ್ರರು, ತಮಿಳರು ಚಪಾತಿಯ ಮುಂದೆ ಸೋತು ಕರಗಿಹೋಗುವುದನ್ನು ನೋಡುವುದು ಬಹಳ ಕಠಿಣ; ಅದೊಂದು ಕರುಣಾಜನಕ ದೃಶ್ಯ. ಡಾಕ್ಟರ್ ಪಟ್ಟಾಭಿ ವರ್ಧಾಕ್ಕೆ ಹಳೇ ಹುಲಿ. ಅವರಿಗಾಗಿ ಮೊದಲೇ ಅನ್ನ ಬಂತು. ಮೊದಲಿಂದ ಕೊನೆಯ ವರೆಗೂ ಅನ್ನವೇ ಬಂತು. ನಾವಿಬ್ಬರೂ ಇದಿರುಬದಿರಿಗೆ ಕೂತಿದ್ದೆವು. ಅವರ ಅದೃಷ್ಟ ಹೀಗೇ ಕೊರಳಿಬಂತು. ನನಗೆ "ಅಖಿಲ ಕರ್ನಾಟಕ ನಾಗರಿಕತೆ"ಯ ಸರ್ಟಿಫಿಕೆಟ್ಟು ಬಂದು ಬಹಳ ದಿನವಾಗಿದೆ. ಮಾತಿನಲ್ಲಿ ಧಾರವಾಡೀ, ಹೈದರಾಬಾದೀ ಮಂಗಳೂರೀ ಪ್ರಭೇದಗಳು ಸೇರಿದ ಮೈಸೂರು ಕನ್ನಡ. ೩೦ ವರ್ಷಕಾಲ ಕೇವಲ ಅನ್ನದಿಂದಲೇ ಬೆಳೆದ ದೇಹಕ್ಕೆ ಈ ಚಪಾತೀರಾಜ್ಯದಲ್ಲಿ ಅನ್ನದ ಆಸರೆ ಸಿಕ್ಕಾಗ ಆದ ಆನಂದ ಇತರರಿಗೆ ಹೇಗೆ ತಿಳಿಯಬೇಕು.

ಮದರಾಸಿನವರಿಗೆ ಮತ್ತೊಂದು ಮಹಾ ಘಟ್ಟವಿದೆ. ರೊಟ್ಟಿ ತಿನ್ನುವ ಜನಕ್ಕೆ ಅನ್ನ ಕಲಸಿಕೊಳ್ಳುವುದು ಬರುವುದಿಲ್ಲ. ಮುಂಬೆರಳುಗಳಿಂದಲೇ ಊಟ ಮುಗಿಸುವ ಜನ. ನಾಲ್ಕೇ ಅಗಳು ಅನ್ನ. ಉಳಿದುದೆಲ್ಲ ಚಪಾತಿ. ಇಂಥವರಿಗೆ ಕೈತುಂಬ ಅಳಕವಾಗಿ ಕಲಸಿಕೊಳ್ಳುವವರನ್ನು ಕಂಡರೆ ಬರೀ ವಿಚಿತ್ರವಲ್ಲ, ಹೇಸಿಗೆ. ಈ ವಿಷಯ ಲಕ್ಷ್ಯದಲ್ಲಿರದಿದ್ದರೆ ಇಂಥಲ್ಲಿ ನಮ್ಮ ಜೊತೆಯವರಿಗೆ ಅಸಹ್ಯಪಟ್ಟಿ ಮಾಡಿದ ಪಾಪ ನಮಗೆ ಸಿದ್ಧ.

ಆಂಡ್ರೂಸರೂ ಊಟಕ್ಕೆ ಬಂದರು. "ನೀವು ತಡವಾಗಿ ಬಂದಿರಿ. ನಿಮಗೆ ಊಟದ ಹಕ್ಕಿಲ್ಲ" ಎಂದರು ಸೇಠಜಿ ನಗುತ್ತ. "ನಾನೆಂದೂ ಹಕ್ಕಿಗಾಗಿ ಹೊಡೆದಾಡುವುದೇ ಇಲ್ಲ. ನನ್ನ ಪದ್ಧತಿ ಪ್ರಾರ್ಥನೆಯದು" ಎಂದು ಮೋರೆಯಲ್ಲಿ ಮಗುವಿನ ನಗೆ ಬೀರುತ್ತ ಅವರು ಉತ್ತರ ಕೊಟ್ಟರು.

ಅವರು ಎಲೆಯ ಮುಂದೆ ಕೂಡುತ್ತಿದ್ದಾಗ ಡಾ|| ಪಟ್ಟಾಭಿ ಮುಂದರಿಸಿದರು, "ಇಂದು ಅನ್ನ ದೇವರು ಪ್ರಾರ್ಥನಾ ಯುಗವನ್ನು ದಾಟಿ ಹೋಗಿದ್ದಾನೆ, ದೀನಬಂಧು !"

ಬಣ್ಣವೊಂದು ಬಿಟ್ಟರೆ, ಆಂಡ್ರ್ಯೂಸರು ಯೂರೋಪಿಯನ್ನರೆಂದು ತಿಳಿಯುವ ಹಾಗೇ ಇರಲಿಲ್ಲ. ಬಿಳೀ ಖಾದೀ ಪಂಚೆ. ಅದೂ ಮೊಳಕಾಲ ವರೆಗೆ. ಮೇಲೊಂದು ನೆಹ್ರೂ ಬನೀನು. ಊಟದಲ್ಲಿ ಚಾಕು, ಫೋರ್ಕು ಗಳ ಗದ್ದಲವಿಲ್ಲ. ಬೆರಳುಗಳಿಂದಲೇ ಊಟ. ಮಾತು ನಮ್ಮೆಲ್ಲರಂತೆ ಹರಕು ಮುರುಕು ಹಿಂದೀ. ಹಿಂದೀ ಜನರೊಡನೆ ಇಷ್ಟು ಬೆರೆತುಹೋದ ಇಂಗ್ಲೀಷು ಜನರನ್ನು ಆಂಡ್ರ್ಯೂಸರ ವಿನಾ ಯಾರನ್ನೂ ನಾನು ನೋಡಿಲ್ಲ. ಸೇವಾಗ್ರಾಮದಿಂದ ಆ ಧೂಳು ತುಂಬಿದ ರಸ್ತೆಯಲ್ಲಿ ಏದುತ್ತ ಆಂಡ್ರ್ಯೂಸರು ಕಾಲಿಗೆ ಚಪ್ಪಲಿಯಿಲ್ಲದೆ ನಡೆದು ಬರುವುದನ್ನು ನೋಡಿದಾಗ ಈ ಮಾತು ಮತ್ತೆ ಮತ್ತೆ ಹೊಳೆಯುತ್ತದೆ.



# ಮಗನ್ ಸಂಗ್ರಹಾಲಯ

ಮಗನ್‌ವಾಡಿ ಕಾಂಗ್ರೆಸ್ಸಿನ ಶಿವನಸಮುದ್ರವಿದ್ದಂತೆ. ಹಿಂದೂಸ್ಥಾನದ ಪುನರುಜ್ಜೀವನಕ್ಕೆ ಅಗತ್ಯವಾದ ಸರ್ವಶಕ್ತಿ ಇಲ್ಲಿಂದ ಹರಿಯ ಬೇಕು. 'ರಷ್ಯಾಗೆ ವಿದ್ಯುಚ್ಛಕ್ತಿ ಇದ್ದಂತೆ ಹಿಂದುಸ್ಥಾನಕ್ಕೆ ಗ್ರಾಮೋ ದ್ಯೋಗ' ಎಂದು ಮಗನ್‌ವಾಡಿಯ ಕಾರ್ಯಕರ್ತರೊಬ್ಬರು ಹೇಳಿದರು. ನಾವು ನೀವು ಈ ಮಾತು ನಂಬದಿರಬಹುದು, ನಂಬಬಹುದು. ಶ್ರೀ ಕುಮಾರಪ್ಪನವರ ಮೋರೆಯಲ್ಲಿ ಮಾತ್ರ ಈ ನಂಬಿಕೆ ಅಖಂಡ ಜ್ಯೋತಿ ಯಂತೆ ಬೆಳಗುತ್ತದೆ. ಹಿಂದೂಸ್ಥಾನದ ಮೋಕ್ಷ ಗ್ರಾಮೋದ್ಯೋಗದಲ್ಲಿ ಎಂಬ ದೃಢವಿಶ್ವಾಸವೇ ಅವರ ಉಸಿರಾಗಿದೆ. ಅದೊಂದು ಧಾರ್ಮಿಕ ವ್ರತದಂತೆ ಅವರ ಇಡೀ ಜೀವನವನ್ನೇ ಆವರಿಸಿದೆ. ಗಂಭೀರತೆಯ ಬಣ್ಣ ವೊಂದನ್ನು ಬಾಳಿನಲ್ಲಿ ಬೆರೆಸಿದೆ. ಮಗನ್‌ವಾಡಿಯ ಮೂಲೆ ಮೂಲೆಯಲ್ಲೂ ಈ ಪ್ರಶಾಂತತೆ ನೀರವವಾಗಿ ಪ್ರತಿಧ್ವನಿಸುತ್ತದೆ.

ಮಗನ್‌ವಾಡಿ ಗಾಂಧೀಜಿಯ ಅಣ್ಣನ ಮಗ ಮಗನಲಾಲ ಗಾಂಧಿಯ ಹೆಸರಿನಲ್ಲಿ ಸ್ಥಾಪಿತವಾಗಿದೆ. ಮಗನ್‌ಲಾಲರ ಸ್ಮಾರಕವೆಂದೇ ಸ್ಥಾಪಿತ ವಾಗಿದೆ. ಗಾಂಧೀ ಸಾಹಿತ್ಯವನ್ನು ಓದುವ ಆಶೆ ಕಡಿಮೆಯಾಗುತ್ತಿರುವ ಈ ಕಾಲದಲ್ಲಿ ಅನೇಕ ಜನರಿಗೆ ಮಗನ್‌ಲಾಲರ ಹೆಸರು ಗೊತ್ತಿಲ್ಲದಂತಾಗಿದೆ. ಮಗನ್‌ಲಾಲರು ಗಾಂಧೀಜಿಯ ಜೀವನದಲ್ಲಿ ಹನುಮಂತನಿದ್ದಂತೆ. ಗಾಂಧೀ ದರ್ಶನವೆಂದು ಇಂದು ಕೆಲವು ಸಿದ್ಧಾಂತಗಳನ್ನು ಕರೆಯುತ್ತಿದ್ದೇವೆ. ಅದನ್ನು ರೂಪಿಸುವುದರಲ್ಲಿ ಬಲ, ಎಡ ಆಗಿ ಇಬ್ಬರೂ ದುಡಿದಾದರೆ. ಸತ್ಯಾ ಗ್ರಹದ ಅಸ್ತ್ರ ಗಾಂಧೀದತ್ತವಾದರೆ ಖಾದೀ ಗ್ರಾಮೋದ್ಯೋಗ ಶಸ್ತ್ರಗಳು ಮಗನ್‌ಲಾಲರು ನೀಡಿದ ದಾನ.

ಮೊದಲು ದಕ್ಷಿಣ ಆಫ್ರಿಕದಲ್ಲಿ, ಅನಂತರ ಸಾಬರ್ಮತಿ ಆಶ್ರಮದಲ್ಲಿ ಮಗನಲಾಲರು ಮಾಡಿದ ತ್ಯಾಗ, ಸೇವೆ ವಿಶ್ವದ ಅನೇಕ ಕಲ್ಯಾಣಕೃತಿಗಳಂತೆ ನೆನಪು-ಮರವುಗಳ ನಡುವೆ ನೆಲೆಯಾಗಿದೆ. ಎಲೆಯ ಮರೆಯ ಕಾಯಿಯ

ಜೀವನ ಅದು. ಮಣ್ಣಿನ ಕೆಳಗೆ ಮಡಿದುಹೋಗುವ ಬೀಜದಂತೆ. ಮಗನ್ ಲಾಲರು ತೀರಿಕೊಂಡಾಗ ಗಾಂಧಿಜಿಯ ಲೇಖನಿಯಿಂದ ಹರಿದ ದುಃಖ ಮತ್ತೊಮ್ಮೆ ಅವರ ಜೀವನದಲ್ಲೇಕೆ, ಎಲ್ಲೂ ಹರಿಯುವ ಸಂಭವ ಕಡಿಮೆ. ಸೊಸೆಗೆ ಅಂದು ಅವರು ಹೇಳಿದ ಮಾತು, ಆ ದುಃಖದ ಪರಾಕಾಷ್ಠತೆಯ ಚಿತ್ರ, ಈಗಲೂ ನೆನಪಿದೆ. 'ತಂಗೀ, ನಿನಗಿಂತ ಹತ್ತು ಪಾಲು ಹೆಚ್ಚು ವೈಧವ್ಯ ನನಗೆ ಬಂದಿದೆ. ಏನುಮಾಡಲಿ!'

ಆ ತಪಸ್ವಿಯ ಬಾಳ ಕನಸು ಮಗನವಾಡಿಯಲ್ಲಿ ರೂಪುಗೊಳ್ಳುತ್ತಿದೆ. ಅದೇ ಶ್ರದ್ಧೆ ಇಲ್ಲಿ ಕಾಣಬರುತ್ತಿದೆ. ಆ ಗುರಿಯ ಗುಡಿಯನ್ನು ಇಂದು ಕುಮಾರಪ್ಪ ಸೋದರರು ಹೊತ್ತಿದ್ದಾರೆ.

ಮಗನ್‌ವಾಡಿ ಒಂದು ಮಟ್ಟಸವಾದ ತೋಟ. ೧೫–೨೦ ಎಕರೆ ನೆಲವಿರಬಹುದು. ವರ್ಧಾಪಟ್ಟಣದ ಒಂದು ಸೆರಗಿನಲ್ಲಿದೆ. ಊರ ಹೊರಗೇನಿಲ್ಲ. ನಿಲುಮನೆಗೆ ಬಹಳ ಹತ್ತಿರವೇ ಇದೆ. ಆದರೂ ಆ 'ಉದ್ಯೋಗ ಮಂದಿರ'ದಲ್ಲಿ ಪಟ್ಟಣದ ವಾತಾವರಣವಿಲ್ಲ. ಎಲ್ಲಾ ಹಳ್ಳಿಯ ವಾಸನೆ. ಎರಡೋ ಮೂರೋ ಕಟ್ಟಡಗಳನ್ನು ಬಿಟ್ಟರೆ ಉಳಿದವೆಲ್ಲಾ ಗುಡಿಸಿಲುಗಳೇ. ಕೆಲಸಗಾರರಿಗೆಲ್ಲ ಸ್ವಚ್ಛವಾದ, ಅಚ್ಚುಕಟ್ಟಾದ ಗುಡಿಸಲುಗಳು. ಶ್ರೀ ಕುಮಾರಪ್ಪನವರ ಗುಡಿಸಲು ಮೊದಲನೆಯದು. ಮುಂದೆ ಸ್ವಲ್ಪ ವರಾಂಡಾದಂತೆ ಚಪ್ಪರ. ಒಳಗೆ ಒಂದು ಕೋಣೆ. ಇನ್ನೊಂದು ಬಚ್ಚಲು. ಕೋಣೆಯಲ್ಲಿ ಒಂದು ಕುರ್ಚಿ, ಕೆಲವು ಪುಸ್ತಕ, ಕೆಲವು ಬಟ್ಟೆ, ಚಪ್ಪರದ ಒಂದು ಹೊರಸು. ಮಳೆಯಿಲ್ಲದ ದಿನಗಳಲ್ಲಿ ಮಲಗಲು ಗುಡಿಸಲಿನ ಮುಂದೆ ಒಂದು ಹಲಗೆ ಮಂಚ. ಗುಡಿಸಲ ಸುತ್ತಲೂ ಸ್ವಲ್ಪ 'ಕಾಂಪೌಂಡು.' ಅದೂ ಬಿದಿರಿನ ತುಂಡುಗಳಿಂದ ಕಟ್ಟಿದ್ದು. ಇಷ್ಟಾದರೆ ಕುಮಾರಪ್ಪನವರ ಕುಟೀರದ ಚಿತ್ರವಾಯಿತು.

ವಿಶ್ರಾಂತಿಗಾಗಿ ಗುಡಿಸಲು ಸೇರಿದರೆ ಸೇರಬೇಕೆ ವಿನಾ, ಇಲ್ಲದಿದ್ದರೆ ಇಪ್ಪತ್ತುನಾಲ್ಕು ಗಂಟೆಯೂ ಕಾರ್ಯಾಲಯದಲ್ಲೇ ಇರುತ್ತಾರೆ ಇವರು. 'ಗ್ರಾಮೋದ್ಯೋಗಗಳು ಓಬೀರಾಯನ ಕಾಲದ ಹೊತ್ತುಹೋಗದ ಆಟ. ಇಂದಿನ ಯಂತ್ರಯುಗದಲ್ಲಿ ಭಾರಿ ಭಾರಿ ಕಾರ್ಖಾನೆಗಳೇ ಗತಿ'; ಹೀಗೆ ಟೀಕೆ ಸದಾ ನಡೆದಿದೆ ನಮ್ಮಲ್ಲಿ. ಗ್ರಾಮೋದ್ಯೋಗದ ಬಗ್ಗೆ ಗಾಂಧಿಜಿಯ

ವಿಚಾರವೇನೆಂದಾಗಲಿ, ಅಖಿಲ ಭಾರತ ಗ್ರಾಮೋದ್ಯೋಗ ಸಂಘದ ತತ್ವವೇನೆಂದಾಗಲಿ ತಿಳಿದುಕೊಳ್ಳುವ ತಾಳ್ಮೆ ನಮ್ಮಲ್ಲಿ ಕಡಿಮೆ. ಇಂಥವಕ್ಕೆಲ್ಲ ಉತ್ತರ ಕೊಡುತ್ತ, ಹಿಂದುಸ್ಥಾನದ ಔದ್ಯೋಗಿಕ ಪ್ರಶ್ನೆಯಲ್ಲಿ ಹಳ್ಳಿಯ ಕಸಬುಗಳ ಸ್ಥಾನವೇನು ಎಂದು ವಿವರಿಸುತ್ತ, ನಾಸ್ತಿಕರನ್ನು ಆಸ್ತಿಕರನ್ನಾಗಿಸುತ್ತ ಕಾರ್ಯಾಲಯಕ್ಕೆ ಅಂಟಿಕೊಂಡಿರುತ್ತಾರೆ ಕುಮಾರಪ್ಪ. ಇಲ್ಲದಿದ್ದರೆ ಹಿಂದುಸ್ಥಾನದ ಯಾವುದೋ ಪ್ರಾಂತದಲ್ಲಿ ಸಂಘದ ಪ್ರಚಾರಕ್ಕಾಗಿ ಹೋಗುತ್ತಾರೆ.

ಡಾಕ್ಟರ್ ಕುಮಾರಪ್ಪನವರನ್ನು ನೋಡಿದವರಿಗೆ ಇವರು ವಿದ್ವಾಂಸರೆಂದು ತಿಳಿಯುವುದೇ ಇಲ್ಲ. ಖಂಡಾಂತರ ಯಾತ್ರೆಮಾಡಿ, ಪರದೇಶ ಪ್ರಸಿದ್ಧಿಯನ್ನು ಪಡೆದು ಬಂದವರು ಎಂದಂತೂ ನಂಬಲು ಸಾಧ್ಯವೇ ಇಲ್ಲ. ಅಷ್ಟು ಸಾದಾ. ಒಂದು ನಿಕ್ಕರು. ಒಂದು ಬನೀನು. ತಲೆಯಮೇಲೆ ಒಂದು ಸೊಟ್ಟನಾದ ವಿಚಿತ್ರ ಹ್ಯಾಟು. ಇವರ ಉಡಿಗೆ ತೊಡಿಗೆಗಳಿಗೆ ಇದು ಎಲ್ಲೆ. ಛಳಿಗಾಲದಲ್ಲೇ ನಾನಿವರನ್ನು ಕಂಡದ್ದು. ಆಗಲೂ ಕೋಟು ಗೀಟು ಇರಲಿಲ್ಲ. ಬನೀನಿನಲ್ಲಿ ಇವರದು ಸ್ವಲ್ಪ ವೈಶಿಷ್ಟ್ಯ. ಕೋಟಿಗಿರುವಷ್ಟು ಜೇಬುಗಳು ಅದಕ್ಕೆ. ಇಷ್ಟು ಜೇಬುಗಳೇಕೆ ಈ ಮಹಾರಾಯನಿಗೆ ಎಂದು ಕೊಂಡೆ ಮೊದಲು ನೋಡಿದ ದಿನ. ಆ ಕುತೂಹಲಕ್ಕೆ ಉತ್ತರ ಬೇಗನೆ ದೊರೆಯಿತು. ಒಂದುದಿನ ಅತಿಥಿಭವನದಲ್ಲಿ ಯಾರೊಡನೆಯೋ ಮಾತಾಡುತ್ತ ಒಂದರ ಹಿಂದೆ ಒಂದಾಗಿ ಎಲ್ಲ ಜೇಬುಗಳನ್ನೂ ಬರಿದು ಮಾಡುತ್ತ ಬಂದರು. ಒಂದರಲ್ಲಿ ಪತ್ರ ವ್ಯವಹಾರ. ಒಂದರಲ್ಲಿ ಹಣಕಾಸಿನ ಬಿಲ್ಲುಗಳು, ವರ್ತಮಾನ ಪತ್ರಿಕೆಗಳ ತುಂಡುಗಳು. ಆರ್ಥಿಕ ಯೋಜನೆಗಳು–ಹೀಗೇ ಅದೊಂದು ಅಕ್ಷಯಪಾತ್ರೆ. ನಗು ಉಕ್ಕಿ ಬಂತು. ತಡೆಯಲಾರದೆ ಎಂದೆ: 'ಇದೇನು ನಿಮ್ಮ ಕಾರ್ಯಾಲಯವೇ ಬಂದ ಹಾಗಿದೆಯಲ್ಲ. 'ಎ ಮೂವಿಂಗ್ ಆಫೀಸ್'. ಮಾತು ನಗೆಯಲ್ಲಿ ತೇಲಿಹೋಯಿತು.

ಇಲ್ಲಿಗೆ ಬರುವ ಮೊದಲು 'ಚಾರ್ಟರ್ಡ್ ಅಕೌಂಟೆಂಟ್' ಆಗಿ ತಮ್ಮದೇ ಒಂದು ಸಂಸ್ಥೆಯನ್ನು ಸ್ಥಾಪಿಸಿದ್ದರು. ಹಣ ಚೆನ್ನಾಗಿಯೇ ಗಳಿಸಿದರು. ಇವರ ತಂದೆ ಮದರಾಸಿನ ಒಂದು ದೊಡ್ಡ ಅಧಿಕಾರದಲ್ಲಿದ್ದು ಯಥೇಷ್ಟವಾಗಿ ಗಳಿಸಿಯೂ ಇದ್ದರು. ಕುಮಾರಪ್ಪನವರ ಧಂಧೆಯಲ್ಲ ಇವ

ರನ್ನು ಗಾಂಧಿಜಿಯ ಬಳಿಗೆ ಸೆಳೆದದ್ದು. ಇವರ ಅರ್ಥಶಾಸ್ತ್ರ ಪಾಂಡಿತ್ಯ. ಅದರಲ್ಲಿ ಸಾಂಪ್ರದಾಯಿಕವಾದ ಹಾದಿಯನ್ನು ಬಿಟ್ಟು 'ಅವೈದಿಕ' ವಾದ ಹೊಸಹಾದಿ ತುಳಿದದ್ದು. 'ಪಬ್ಲಿಕ್ ಫೈನಾನ್ಸ್ ಅಂಡ್ ಇಂಡಿಯನ್ ಪಾವರ್ಟಿ ' *ಎಂಬ ಇವರ ಪುಸ್ತಕ ಆ ಬಾಗಿಲು ತೆರೆಯಿತು.

ಸಾಬರ್ಮತಿಗೆ ಬರಲು ಗಾಂಧಿಜಿಯ ಕಾಗದ ಹೋಯಿತು. ಯಾರಿಗೆ ತಾನೇ ಇಂಥ ವರ ಬೇಡ! ಬೇಡದೆ, ನೆನೆಯದೆ ಮನೆಯ ಬಾಗಿಲಿಗೇ ದೇವರು ಬಂದರೆ ಹೇಗಿದ್ದೀತು! ಕುಮಾರಪ್ಪನವರ ಮನಸ್ಸಿನಲ್ಲಿ ಆಗ ಮೂಡಿದ ವಿಚಾರ, ಹೃದಯದಲ್ಲಿ ಉಕ್ಕಿದ ಆನಂದ ಕಾವ್ಯ ಯೋಗ್ಯವೇ ಸರಿ.

ನೇರಾಗಿ ಬಂದರು. ಮಾತುಕತೆಯಾಯಿತು. ಗುಜರಾತ್ ವಿದ್ಯಾಪೀಠದಲ್ಲಿ ಅರ್ಥಶಾಸ್ತ್ರದ ಅಧ್ಯಾಪಕರಾದರು. ಗಾಂಧಿಜಿಯ ಆರ್ಥಿಕ ವಿಚಾರ ಸಿದ್ಧಾಂತಗಳನ್ನು ಸಮನ್ವಯ ಮಾಡಿ, ಪ್ರಚಾರ ಮಾಡುವ ಕೆಲಸ ಅಂದೇ ಅವರ ಪಾಲಿಗೆ ಬಂತು.

ಕುಮಾರಪ್ಪನವರು ಶ್ರೀಮಂತರು. ಹೇರಳವಾಗಿ ಆಸ್ತಿಯಿದೆ. ಈಗ ಇವರಿಗೆ ಮಗನವಾಡಿಯಲ್ಲಿ ಸಿಗುವ ೫೦ ರೂ. ಸಂಬಳವೂ ಇವರ ವೆಚ್ಚಕ್ಕಿಂತ ಹೆಚ್ಚು. ಒಂಟಿಗ ಬ್ರಹ್ಮಚಾರಿ; ಸರಳಜೀವನ. ೨೦-೩೦ ರೂಪಾಯಿ ಬ್ಯಾಂಕಿಗೆ ಹೋಗುತ್ತದೆ. ಈ ಸಂಗ್ರಹಕ್ಕೆ ಯಾರೂ ವಾರಸುದಾರಲಿಲ್ಲ. ಮಗನವಾಡಿಗೇ ಇದ್ದಂತಿದೆ ಆ ಭಾಗ್ಯ. ಇವರ ಜೀವನ, ಮನೋವೃತ್ತಿಗಳೂ ಆ ಹಾದಿಯ ಕಡೆಯೇ ಕೈ ತೋರಿಸುತ್ತಿವೆ. ಇವರ ತಮ್ಮ ಶ್ರೀ ಭರತನ್ ಕುಮಾರಪ್ಪನವರಿಗೆ ಮದುವೆಯಾಗಿದೆ. ಶ್ರೀಮತಿ ಸೀತಾದೇವಿಯೂ ವಿದ್ಯಾವತಿ. ಅವರೂ ಮಗನ್‌ವಾಡಿಗೆ ಬಾಳನ್ನು ಧಾರೆಯೆರೆದಿದ್ದಾರೆ. ಈ ಸೋದರರ ಲಕ್ಷ ರೂಪಾಯಿಗೆ ಮೀರಿದ ಆಸ್ತಿ ಮಗನವಾಡಿಗೇ ಸಲ್ಲುವುದರಲ್ಲಿ ಸಂದೇಹವಿಲ್ಲ.

ಗಾಂಧಿಜಿಗೆ ಹದ್ದಿನ ಕಣ್ಣು. ಕೆಲಸಕ್ಕೆ ತಕ್ಕ ಗಂಡನ್ನು ಹುಡುಕುವುದರಲ್ಲಿ ಸಮರ್ಥರಾದ ಪುರೋಹಿತರು. ಚಾಣಾಕ್ಷನಾದ ನಾಯಕ

* 'ರಾಜ್ಯಾದಾಯವೂ ಬಡತನವೂ' ಎಂದು ಕನ್ನಡದಲ್ಲಿ ಭಾಷಾಂತರವಾಗಿದೆ. ಮಿಂಚಿನಬಳ್ಳಿ; ಧಾರವಾಡ.

ದಳಪತಿಯನ್ನು ಆರಿಸಿಕೊಳ್ಳುವಂತೆ. ಕುಮಾರಪ್ಪ ಸೋದರರನ್ನು ಮಗನ ವಾಡಿಗೆ ಆರಿಸಿ ಇಹಪರಗಳೆರಡನ್ನೂ ಸಾಧಿಸಿದರು. ಸಂಸ್ಥೆಯ ಪ್ರಸಾರವೂ ಆಯಿತು, ಪ್ರೋಷಣೆಯೂ ಆಯಿತು. ಈ ಅಕ್ಕಸಾಲಿಗತನವನ್ನು ಗಾಂಧೀಜೀ ಎಲ್ಲ ಕ್ಷೇತ್ರಗಳಲ್ಲೂ ತೋರಿಸಿದ್ದಾರೆ. ಶ್ರೀ ಮಹಾದೇವ ದೇಸಾಯಿ, ಕಿಶೋರ ಲಾಲ ಮಶ್ರೂವಾಲಾ, ಸತೀಶ ಚಂದ್ರ ದಾಸ ಗುಪ್ತ, ರಾಜಕುಮಾರಿ ಅಮೃತ ಕುವರ್ ಇವರೆಲ್ಲರೂ ಆ ಒರೆಗಲ್ಲಿಗೆ ಸಿಕ್ಕ 'ಹದಿನಾರಾಣೆ' ಜನ.

ಕುಮಾರಪ್ಪನವರ ಗುಡಿಸಲು ಮೊದಲು ಸಿಗುತ್ತದೆ ಎಂದೆನಲ್ಲ. ಅದಕ್ಕಿಂತ ಮೊದಲು ಕಾಣುವುದು 'ಮಗನ ಸಂಗ್ರಹಾಲಯ'. ರಸ್ತೆಗೆ ಮಗ್ಗುಲಾಗಿ ಭವ್ಯವಾಗಿ ಕಾಣುತ್ತದೆ. ಎರಡೂ ರೆಕ್ಕೆಗಳನ್ನು ಅಗಲಿಸಿ ತೇಲುತ್ತ ಹೋಗುವ ಗರುಡನಂತಿದೆ. ಹಂಸಪಾದದಂತೆ ಉದ್ದವಾಗಿ ಚಾಚಿಕೊಂಡಿರುವ ಎರಡು ಕೈಗಳು. ಎರಡನ್ನೂ ಜೋಡಿಸುತ್ತ, ನಡುವೆ ಅರ್ಧ ಚಂದ್ರನ ಮಾದರಿಯ ನಡುಮನೆ. ತ್ರಿಕೋಣದ ಆಕಾರ. ಒಂದು ಪಕ್ಕದ ಗೆರೆ ಇಲ್ಲ. ಬೊಂಬಾಯಿಯ ಇಂಜಿನೀಯರರೊಬ್ಬರು ಕಟ್ಟಿದುದು. ಕಟ್ಟಡ ಸಣ್ಣದಾಗಿದ್ದೂ ಭವ್ಯವಾಗಿ ಕಾಣುವ ಮಾದರಿ. ಕಳೆದ ವರ್ಷದ ಕೊನೆಯಲ್ಲಿ ಸ್ವಯಂ ಗಾಂಧೀಜೀ ಈ ಸಂಗ್ರಹಾಲಯ ವನ್ನು ತೆರೆದರು.

ಮಗನ್ ಸಂಗ್ರಹಾಲಯದಲ್ಲಿ ಅಂದವಾಗಿ ಪ್ರದರ್ಶಿಸಲ್ಪಟ್ಟ ಆ ವಸ್ತುಗಳನ್ನು ನೋಡುತ್ತಾ ಒಂದು ದಿನವೆಲ್ಲಾ ಕಳೆದೆ. ಕೆಲಸದ ಭಾರ ಹೆಚ್ಚಾಗಿದ್ದುದರಿಂದ ಅಲ್ಲಿಗೇ ಮುಗಿಸಬೇಕಾಯಿತು. ನೋಡು ನೋಡುತ್ತ ಕೆಲವು ಮಾತು ಸುಲಭವಾಗಿ ಅರ್ಥವಾಗುತ್ತವೆ. ವಾದ ವಿವಾದಗಳ ಬಲೆಯಲ್ಲಿ ಸಿಕ್ಕಿ, ಅರ್ಥದ ಸೀಮೆಗೆ ದೂರ ಹಾರಿಹೋಗುವ ಜನಜೀವನದ ಅನೇಕ ಬಣ್ಣಗಳು ಇಲ್ಲಿ ಕಾಣಬರುತ್ತವೆ. ಖಾದೀ—ಹಿಂದು ಸ್ಥಾನದ ಸಂಜೀವನಿಯಿರಲಿ ಬಿಡಲಿ, ನಿಜವಾಗಿ ಅದು ಕಲೆ ಎನ್ನುವದು ಮಾತ್ರ ಕಲ್ಲೆದೆಯ ಯಾಂತ್ರಿಕನಿಗೂ ಅನಿಸುತ್ತವೆ. ಢಾಕಾಮಲಮಲ್ಲು, 'ಹರಿವ ನೀರು' 'ಸಂಜೆಯ ಮಂಜು' ಮಂತಾದ ಹೆಸರುಗಳೂ ಆ ಗತವೈಭವವೂ ಎಲ್ಲಾ ನೆನಪಿಗೆ ಬರುತ್ತವೆ. ಹಾಗೆ ಒಂದು ಕನಸೂ ರೂಪುಗೊಳ್ಳುತ್ತ ಹೋಗುತ್ತವೆ. ಬಿಡಿದಿನಗಳಲ್ಲಿ ನೂಲುತ್ತ, ಒಂದೆರಡು

ಪುಡಿಕಾಸು ಗಳಿಸಿ, ಬಾಳಿಗೆ ಸೊಬಗನ್ನು ಇಷ್ಟೋ ಅಷ್ಟೋ ಬೆರೆಸಿಕೊಳ್ಳುವ ಬಡವರ ಮುಖಗಳು ಸಂಗ್ರಹಾಲಯದ ಮೂಲೆ ಮೂಲೆಯಲ್ಲೂ ಕಾಣಿಸಿಕೊಳ್ಳುತ್ತವೆ. ನನ್ನ ಜೊತೆಯಲ್ಲಿ ಸಂಯುಕ್ತ ಪ್ರಾಂತದ ಮುಂದಾಳುಗಳೊಬ್ಬರು ಇದ್ದರು. "ಓ! ಇಟ್ ಇಸ್ ಎ ಸ್ಪೆಲ್" ಎಂದರು ಸಂಗ್ರಹಾಲಯವನ್ನು ನೋಡಿ.

ಹತ್ತಿಯ ಬೀಜದಿಂದ ಮೊದಲುಮಾಡಿ, ಹಂಜಿ, ನೂಲು, ಅರಿವೆ, ಬಣ್ಣ, ಎಲ್ಲಾ ಮೆಟ್ಟಲುಗಳೂ ಸಮರ್ಪಕವಾಗಿ ಇಲ್ಲಿ ಪ್ರದರ್ಶಿಸಲ್ಪಟ್ಟಿವೆ. ಪ್ರಾಂತ ವಿಭಾಗಗಳೂ ಇವೆ. ಕಾಶ್ಮೀರದ ಉಣ್ಣೆಯ ಕೈಗಾರಿಕೆ ಚಿತ್ರಗಳು, ಖಾದೀ ದೃಶ್ಯಗಳು. ನಡುನಡುವೆ ಸುಲಿದ ಬಾಳೆಯ ಹಣ್ಣಿನಂಥ 'ಮಾಹಿತಿ ಪತ್ರಿಕ'ಗಳು ಮನೋಹರವಾಗಿವೆ. ಖಾದಿಯಲ್ಲದೆ ಇತರ ಗ್ರಾಮೋದ್ಯೋಗಗಳಿಗೂ ಸ್ಥಾನವಿದೆ.

ಆಲಯದ ಬಲಕ್ಕೆ ಕುಮಾರಪ್ಪನವರ ಕುಟೀರ. ಅದರ ಸುತ್ತಲೂ ಮುಖ್ಯ ಕಾರ್ಯಕರ್ತರ ಗುಡಿಸಲುಗಳು. ಸ್ವಲ್ಪ ದೂರವಾಗಿ, ಬೇಲಿಗೆ ಅಂಟಿಕೊಂಡು ಗೋಶಾಲೆ. ಮಗನ್‌ವಾಡಿಯಲ್ಲಿ ಬೇಸಾಯವೂ ಸ್ವಲ್ಪ ನಡೆಯುತ್ತದೆ. ಮುಖ್ಯವಾಗಿ ಭಾವಿಯಿಂದ ನೀರೆತ್ತಲು ಎತ್ತುಗಳನ್ನುಪಯೋಗಿಸುತ್ತಾರೆ. ಬಕೆಟ್ಟುಗಳ ಸಾಲಿನ ರಾಟೆಯಿಂದ ನೀರು ಎತ್ತುತ್ತಾರೆ. ಹಳ್ಳಿಗಳಲ್ಲಿ ಎತ್ತುಗಳು ಜಾರಿಕೆಯಲ್ಲಿ ಇಳಿದು ಏರಿಕೆಯನ್ನು ಅಡರಿ ಹೋಗುವ ರೀತಿಯಂತಲ್ಲ. ಗಾಣದಲ್ಲಿದ್ದಂತೆ ಎತ್ತು ಒಂದೇ ಸುತ್ತದಲ್ಲಿ ತಿರುಗುತ್ತವೆ, ಭಾವಿಯ ಮಗ್ಗುಲಲ್ಲಿ ಒಂದು ನೀಳವಾದ ತೊಟ್ಟಿ (ರಿಸರ್ವಾಯರ್). ಅಲ್ಲಿಂದ ಮಗನ್‌ವಾಡಿಗೆಲ್ಲಾ ನಲ್ಲಿಗಳಲ್ಲಿ ನೀರು ಹರಿಯುತ್ತದೆ. ತೋಟದಲ್ಲಿ ಕಿತ್ತಲೆ, ಮಾವು ಮೊದಲಾದ ಗಿಡಗಳಿವೆ. ಅವಕ್ಕೆಲ್ಲಾ ನೀರು ಕಾಲುವೆಗಳಲ್ಲಿ ಹರಿಯುತ್ತದೆ. ವನದ ಕೊಟ್ಟಿಗೆ ಬಹಳ ಚೊಕ್ಕಟವಾಗಿದೆ. ಮಧ್ಯಾಹ್ನದ ಹೊತ್ತು ಮಂಚ ಹಾಕಿ ಮಲಗಿ ಹಾಯಾಗಿ ನಿದ್ದೆ ಮಾಡಬಹುದು. ಗಂಜಳ, ಸಗಣಿಯ ನಾತ ಸ್ವಲ್ಪವೂ ಬರುವುದಿಲ್ಲ.

ಮಗನ್‌ವಾಡಿಯ ಬೇಸಾಯದ ವಿಭಾಗಕ್ಕೆ ಕನ್ನಡಿಗರೊಬ್ಬರು ಯಜಮಾನರಾಗಿದ್ದಾರೆಂದು ತಿಳಿದು, ಬೇಡ ಬೇಡವೆಂದರೂ ಮನಸ್ಸು ಹಿಗ್ಗಿತು. ಶ್ರೀ ಬುಲ್ಲನ್ ನೀಲಗಿರಿಯಲ್ಲಿ ಕಾಫೀ ಬೆಳೆವ ಜನ. ಮೂರುವರ್ಷ

ಗಳಿಂದ ಇಲ್ಲಿದ್ದಾರೆ. ಅವರ ಕನ್ನಡದಲ್ಲಿ ತಮಿಳು ಅರ್ಧಕ್ಕರ್ಧ ಸೇರಿದೆ. ಆದರೂ ಕನ್ನಡವೆಂದು ಗುರುತಿಸುವುದು ಕಷ್ಟವಲ್ಲ. ಬುಲ್ಲನ್‌ರಿಗೆ ಕನ್ನಡದ ಮೇಲೆ ಸಾಧಾರಣವಾಗಿ ಅರ್ಥವಾಗದ ಅಸುಮಾನವಿದೆ. ಅವರು ಬರೆವುದು ಓದುವುದು ತಮಿಳು, ಕನ್ನಡ ಅಕ್ಷರಗಳೇ ಬರುವುದಿಲ್ಲ. ಕನ್ನಡ ಅವರಿಗೆ ಬರೀ ಮನೆಮಾತು, ಅದೂ ಅರೆ ಬರೆ. ಹೀಗಿದ್ದರೂ ಅವರಿಗೆ ಕನ್ನಡದ ಮೇಲೆ ಅಭಿಮಾನ ಇದ್ದುದು ಯಾರಿಗೆ ಸಂತೋಷವಾಗದು? "ಮದರಾಸಿಗೆ ಸೇರಿ ಕನ್ನಡ ನಮ್ಮ ಪಾಲಿಗೆ ಮಾಯವಾಗುತ್ತಿದೆ. ಕನ್ನಡದವರು ಸ್ವಲ್ಪ ವಾದರೂ ನಮಗಾಗಿ ಪ್ರಯತ್ನ ಮಾಡಬೇಡವೆ? ಏನು ಕರುಳಿಲ್ಲದ ಜನ ನಮ್ಮವರು!" ಎಂದರು ಅವರು. ಸುಮ್ಮನೆ ಮೋರೆ ತಗ್ಗಿಸಬೇಕಾಯಿತು.

ಶ್ರೀ ಬುಲ್ಲನ್‌ರು ಆವೇಗದಲ್ಲಿದ್ದರು. ಅಲ್ಲಿಗೇ ಆ ಧಾರೆಯನ್ನು ನಿಲ್ಲಿಸುವುದು ಅವರಿಗೆ ಸಾಧ್ಯವಾಗಲಿಲ್ಲ. 'ಈ ಊರಲ್ಲೇ ಇದೆಯಲ್ಲ, ಹಿಂದೀ ಪ್ರಚಾರ ಸಮಿತಿ, ನೀವು ನೋಡಿದೀರಾ? ರಾಮೇಶ್ವರಕ್ಕೆ ಹೋಗಿ ಹಿಂದೀ ಕಲಿಸುತ್ತಾರಲ್ಲ ಆ ಜನ. ನಮ್ಮ ಮಾತು ನಮಗೆ ಕಲಿಸೋರು ಯಾರೂ ಬೇಡವೇ? ಇಷ್ಟೇ ಅಲ್ಲ. ಈ ಹಿಂದೀ ಕಲಿಸೋ ಜನ ಯಾರು ಗೊತ್ತೆ, ನಿಮಗೆ? ಕನ್ನಡದವರೇ, ನಾನು ನೋಡಿದೇನೆ. ತಮ್ಮ ಕನ್ನಡವನ್ನು ತಮ್ಮ ಜನರಿಗೆ ಕಲಿಸೋ ಗೋಜಿಲ್ಲವಾಗಲಿ, ಹಿಂದೀ ಕಲಿತು, ಕಲಿಸೋದಕ್ಕೆ ನಾನು ತಾನು—ಎಂತ ಬರುತ್ತಾರೆ. ನಾನಂತೂ ಊರಿಗೆ ಹೋಗುವ ಮೊದಲು ಕನ್ನಡ ಕಲಿಯಬೇಕು ಅಂತ ಇದೇನೆ' ಎಂದರು. ಅವರ ಭಾಷೆ ಪೂರಾ ಹೀಗೆ ಇರಲಿಲ್ಲ. ಅದನ್ನು ಕನ್ನಡಕ್ಕೆ ತಿರುಗಿಸಿಕೊಂಡಿದೇನೆ.

"ಈ ಇಪ್ಪತ್ತೆಂಟು ಲಿಪಿ ನಮ್ಮ ದೇಶಕ್ಕೆ ಏಕೆ? ಲಿಪಿಗೆ ಲಿಪಿ ಭಾರ ಒಂದೇ ಲಿಪಿ ಇದ್ದರೆ ಎಷ್ಟು ಅನುಕೂಲ" ಎಂದೆ ನಾನು.

"ಸರಿ, ಗೊತ್ತಾಯಿತು. ಎಲ್ಲಿ ಕನ್ನಡ ಕಲಿಸು ಅಂತ ಗಂಟುಬೀಳುತ್ತೀನೋ ಎಂತ ನಿಮ್ಮ ಹೆದರಿಕೆ. ಸಾಕಪ್ಪ ಮಾರಾಯ, ಸಾಕು". ನಗುತ್ತ ಚುಚ್ಚಿಯೇ ಬಿಟ್ಟರು. ಬುಲ್ಲನ್ ಎಂಬುದು ಅವರ ಕಾನ್ವೆಂಟ್ ಶಾಲೆಯ ಹೆಸರು ಅವರ ನಿಜನಾಮಧೇಯ ಬುಳ್ಳೇಗೌಡ.



# ಮಗನ್‌ವಾಡಿ

ಮಗನ್‌ವಾಡಿಯ ಹೆಬ್ಬಾಗಿಲಿಗೆ ರೈತ ದಂಪತಿಗಳ ಪ್ರತಿಮೆಗಳು ಅತ್ತೊಂದು ಇತ್ತೊಂದು ಕೆತ್ತಲ್ಪಟ್ಟಿವೆ. ಅವರೇ ದ್ವಾರಪಾಲಕರು. ಗೋಪುರದಲ್ಲಿ ಗಂಟೆ. ಬಾಗಿಲು, ದೊಡ್ಡ ಗುಡಿಗಳ ಮಹಾದ್ವಾರದ ರೀತಿ. ಗ್ರಾಮೋದ್ಯೋಗದ ಒಂದು ಸಂಕೇತ ಇದು. ಒಳಗೆ ಹೋದರೆ ಎಡಕ್ಕೆ-ಬೀಸುವ ಕಲ್ಲು, ಎಣ್ಣೆಯ ಗಾಣ, ಜೇನು ಹುಳಗಳ ವ್ಯವಸ್ಥೆ, ಮುಂತಾದ ವಿಭಾಗಗಳಿವೆ. ಇದಿರಿನಲ್ಲಿ ವಿಶಾಲವಾದ ಕಾಗದದ ಶಾಖೆ. ಸಾಬೂನಿನ ಭಾಗ, ಮಗನ್‌ವಾಡಿಯ ರಸಾಯನ ಶಾಲೆಗಳೂ ಅಲ್ಲೇ ಇವೆ. ವೈಶಾಲ್ಯದ ಪ್ರಮಾಣದಲ್ಲೂ ವಿದ್ಯಾರ್ಥಿಗಳ ಸಂಖ್ಯೆಯಲ್ಲೂ ಕಾಗದದ ಶಾಖೆಯೇ ಹೆಚ್ಚು ಮಹತ್ವದ್ದು. ಕಾಗದದ ಉಪಯೋಗ ದಿನೇ ದಿನೇ ಬೆಳೆಯುತ್ತಿರುವ ಈ ಕಾಲದಲ್ಲಿ ಇದು ಸ್ವಾಭಾವಿಕವೇ.

ಬೀಸುವ ಕಲ್ಲಿನಲ್ಲಿ ಅನೇಕ ರೀತಿಗಳಿವೆ. ತಿರುಗಣೆ ತಿರುಗಿಸಿದ ಹಾಗೆ, ಅಥವಾ ಚರಖಾ ತಿರುಗಿಸಿದ ಹಾಗೆ ತಿರುಗಿಸಿ ಬೀಸುವ ಕಲ್ಲೂ ಇದೆ. ಭತ್ತವನ್ನು ಕುಟ್ಟುವ ಬದಲು ಬೀಸುವ ಕಲ್ಲಿನಲ್ಲಿ ಸುಲಿಯುವ ವ್ಯವಸ್ಥೆಯಿದೆ. ಎಲ್ಲದರಲ್ಲೂ ಒಂದು ದೃಷ್ಟಿಯಿದೆ. ಸಾಮಾನ್ಯವಾದ ಬೀಸುವ ಕಲ್ಲಿಗಿಂತ ಬೇಗನೆ ಹೆಚ್ಚು ಹಿಟ್ಟು ಉದುರಬೇಕು. ಬೀಸುವ ಶಕ್ತಿ ಹೆಚ್ಚು ಇರಬೇಕು.

ಗಾಣಪಲ್ಲಿ ಕೆಲವು ಒಡೆದು ಕಾಣುವ ವ್ಯತ್ಯಾಸಗಳಿವೆ. ಗಾಣದೆತ್ತು ಸುತ್ತುವರಿಯಲು ನೆಲದ ಮಟ್ಟಕ್ಕೆ ೨-೩ ಅಡಿಯಷ್ಟು ತಗ್ಗಿನಲ್ಲಿ ಚಕ್ರಾಕಾರವಾಗಿ ಕಾಲುವೆ ತೋಡಿದಾರೆ. ಗಾಣದ ಪೀಠ, ನೆಲದ ಮೇಲಿದ್ದು ಎತ್ತಿನ ಓಡಾಟ ಆ ಮಟ್ಟಕ್ಕೇ ಆದರೆ ಎತ್ತಿನ ಕಾಲಧೂಳಿ ಎಣ್ಣೆಯೊಳಕ್ಕೆ ಹಾರುವ ಸಂಭವವಿದೆ. ಈ ತಗ್ಗು ತೋಡುವುದರಿಂದ ಧೂಳು ಮೇಲೆ ಹಾರುವದಿಲ್ಲ. ಎಣ್ಣೆ ಕಸರು ಇಲ್ಲದೆ ಇರುತ್ತದೆ. ಸಾಧಾರಣವಾಗಿ ಗಾಣದ ಬಟ್ಟಲು ಇಡೀ ಮರದ ತುಂಡಿನಿಂದ ಮಾಡಿದುದಾಗಿರಬೇಕು. ಮಗನ್‌ವಾಡಿಯಲ್ಲಿ ಎಣ್ಣೆ ನಿಲ್ಲುವ ಬಟ್ಟಲಿನೊಳಗೆ ಹಿಂಡಿ ತಿರುವುವ ಸ್ಥಳದಲ್ಲಿ 'ವಾಷರ್'ಗಳಂತೆ

ಒಂದು 'ಸುತ್ತುಗ'ವನ್ನು ಸೇರಿಸಿದ್ದಾರೆ. ಸಾಧಾರಣವಾಗಿ ಕೆಲವು ವರ್ಷಗಳ ತರುವಾಯ ಗಾಣಗಳು ಜಿಗಟು ಹಿಡಿದು ಬಿಡುತ್ತವೆ. ಆಗ ಇಡೀ ಬಟ್ಟಲನ್ನೇ ಕಿತ್ತುಹಾಕಿ ಹೊಸದನ್ನು ಹಾಕಬೇಕು. ಆದರೆ, ಇದರಲ್ಲಿ ಬರೀ ಸುತ್ತುಗವನ್ನು ತೆಗೆದು ಬೇರೆ ಹಾಕಿದರಾಯಿತು. ಹೊಸ ಬಟ್ಟಲನ್ನು ಕೊಳ್ಳಬೇಕಾಗಿಲ್ಲ. ಹಳ್ಳಿಯ ಗಾಣಗಳಲ್ಲಿ ಎಣ್ಣೆ ಹಿಂಡಿದ ಹಾಗೆಲ್ಲ, ಹಿಂಡಿಯನ್ನು ಕಲಕುತ್ತ ತಿರುವಿಹಾಕುವ ಕೆಲಸವನ್ನು ಒಬ್ಬರು ಮಾಡಬೇಕಾಗುತ್ತದೆ. ಎತ್ತು ಹೊಡೆಯುವುದು, ಹಿಂಡಿ ತಿರುವುತ್ತಿರುವುದು, ಈ ಎರಡೂ ಕೆಲಸಗಳನ್ನು ಮಾಡುತ್ತ ಗಾಣಿಗನಿಗೆ ಬೇರೆ ಯಾವ ಕೆಲಸವೂ ಸಾಧ್ಯವಿಲ್ಲದಾಗುತ್ತದೆ. ಈ ಗಾಣದಲ್ಲೋ ಎತ್ತು ತಗ್ಗಿನಲ್ಲಿದ್ದು ತಾನೇ ತಿರುಗುತ್ತದೆ. ಹಿಂಡಿ ತಿರುವಿಹಾಕುವ ಉದ್ದನೆ ಕಟ್ಟಿಗೆಯೊಂದು ಯಂತ್ರಕ್ಕೇ ಜೋಡಿಸಲ್ಪಟ್ಟಿದೆ. ಅದು ತಾನೇ ಹಿಂಡಿಯನ್ನು ಕಲಕುತ್ತದೆ. ಗಾಣದ ಗತಿಯಿಂದಲೇ ಈ ಕೆಲಸ ನಡೆಯುತ್ತದೆ. ಎತ್ತೇ ಈ ಎರಡನ್ನೂ ಮಾಡುತ್ತದೆ. ಗಾಣಿಗನ ನಡು ನಡುವೆ ಬೇರೆ ಸಣ್ಣ ಪುಟ್ಟ ಕೆಲಸಗಳನ್ನು ಮಾಡಬಹುದು. ನಾನು ನೋಡಿದ ಗಾಣಿಗ ಗುಜರಾತ ವಿದ್ಯಾಪೀಠದ ಪದವೀಧರ. ಗಾಣ ತಿರುಗಿಸುತ್ತ ಗುಜರಾತಿ ವರ್ತಮಾನ ಪತ್ರಿಕೆಯನ್ನು ಓದುತ್ತಿದ್ದ. ಎಣ್ಣೆಯೂ ಹಳೆಯ ಗಾಣಗಳ ಒಂದೂವರೆ ಪಟ್ಟು ಇಳಿಯುತ್ತದೆ ಇದರಲ್ಲಿ.

ಈಚೆಗೆ ಗಾಣದಲ್ಲಿ ಹೆಚ್ಚು ಫಲ ಸಿಗಲೆಂದು ಯಂತ್ರಶಕ್ತಿಯನ್ನು ಇದಕ್ಕೆ ಜೋಡಿಸಲಾಗುತ್ತಿದೆ. ಗಾಣವೇನೋ ಕಟ್ಟಿಗೆಯದೆ. ಬೇರೆ ಯಾವ ರೀತಿಯ ಗಾಣದಲ್ಲೂ ಎಣ್ಣೆಯ ಸತ್ವ, ತಿರುಳು ಉಳಿಯುವುದಿಲ್ಲ, ಸ್ವಲ್ಪವಾದರೂ ಕಡಿಮೆಯಾಗುತ್ತದೆ. ಎತ್ತಿಗೆ ಬದಲು ಯಂತ್ರಹಾಕಿ ನೋಡುತ್ತಿದ್ದಾರೆ, ಅಷ್ಟೆ. ಮಗನ್‌ವಾಡಿಯ ಈ ಪ್ರಯೋಗವನ್ನು ಆಗಲೇ ಇತರ ಕಡೆ ಅನುಸರಿಸುತ್ತಿದಾರಂತೆ.

ಅಲ್ಲಿಂದ ಮುಂದೆ ಜೇನು ತುಪ್ಪದ ವಿಭಾಗ. ಫ್ರೆಂಚರ ದೇಶದಲ್ಲಿ ಜೇನು ಹುಳ ಸಾಕುವ ಶಾಸ್ತ್ರವೊಂದು ವಿಸ್ತಾರವಾಗಿ ತಯಾರಾಗಿದೆ. ಜನಸಂಖ್ಯೆ ಮೇರೆ ಮೀರಿ ಬೆಳೆದು, ಬೇಸಾಯಕ್ಕಾಗಿ ಅಡವಿಗಳೆಲ್ಲ ಮಾಯವಾಗುತ್ತಿರುವ ಈ ಕಾಲದಲ್ಲಿ ಜೇನು ಹುಳಗಳ ಆರೈಕೆ ತಿಳಿಯದಿದ್ದರೆ ಜೇನು ತುಪ್ಪಕ್ಕೆ ಸ್ವಲ್ಪ ಕಾಲದಲ್ಲೇ ಎಳ್ಳುನೀರು ಬಿಡಬೇಕಾಗಬಹುದು. ಇತ್ತೀಚೆಗೆ

ಪೇಟೆಯಲ್ಲಿ ಜೇನುತುಪ್ಪವೆಂದು ಮಾರುವ ಬೆಲ್ಲದ ಪಾಕವನ್ನು ನೆನೆದರೆ ಈ ವಿದ್ಯೆಯ ಅವಶ್ಯಕತೆ ಎಂಥವರಿಗೂ ಗೊತ್ತಾಗುತ್ತದೆ. ಇದರ ಆನಂದವಾದರೂ ಎಂಥದು! ಗ್ರಹಗತಿ ವಕ್ರವಾದಾಗ ಯಮದೂತರಂತೆ ಬಿಡದೆ ಅಟ್ಟಿ ಬಂದು ರಕ್ತಹೀರುವ ಈ ರಾಕ್ಷಸ ಹುಳಗಳು ಸಾಕಿದ ಕುನ್ನಿಗಳಂತೆ ಪೆಟ್ಟಿಗೆಯಲ್ಲಿ ಬಿದ್ದಿರುವುದನ್ನು ನೋಡಿದರೆ ಹೆಮ್ಮೆ ಏರಿಬರುತ್ತದೆ. ಮನುಷ್ಯ ಎಷ್ಟಾದರೂ ಜೀವಲೋಕದ ಸಾರ್ವಭೌಮ! ಅವನಿಗೆ ಬಗ್ಗದ್ದೂ ಉಂಟೆ?

ಕಾಗದದ ವಿಭಾಗ ದೊಡ್ಡದು. ಅದರ ಸಾಹಿತ್ಯವೂ ಬೆಳೆದಿದೆ. ಈಗಂತೂ ನಮ್ಮ ಬಾಳಿನಲ್ಲಿ ಕಾಗದದ ಸ್ಥಾನ ದೇವರಿಗೂ ಇಲ್ಲ; ಹೆಂಡತಿಗೂ ಇಲ್ಲ. ಮೊದಲು ದೇವರೆದುರಿಗೆ ನುಡಿವುದೆಂದರೆ ಮೀರಲಾಗದ ಕಟ್ಟು. ದೇವರ ಆಣೆಯೆಂದರೆ ತಪ್ಪಲಾರದ ಧರ್ಮ. ವಂಶಪಾರಂಪರ್ಯವಾಗಿ ನಡೆದು ಬಂದ ಹಿರಿಯ ಜಗಳಗಳೂ ಕೂಡ ದೇವರ ಸನ್ನಿಧಿಯಲ್ಲಿ ಗಳಿಗೆಯಲ್ಲಿ ತೀರ್ಮಾನವಾಗಿ, ವಿರೋಧಿಗಳಿಗೆ ಹಾಲು-ಅನ್ನದ ರಾಜಿಯಾಗುತ್ತಿತ್ತು. ಎಷ್ಟು ಪ್ರಕಾರಗಳಿಂದ ಅಡಗಿಸಿಟ್ಟ ಸತ್ಯವಾಗಲಿ, ಸಾವಿನ ಅಂಜಿಕೆಯಿಂದ ಮರೆಮಾಡಿದ ಅಪರಾಧವೆ ಆಗಲಿ, ದೇವರ ಮುಂದೆ ಬಟ್ಟಬಯಲು. ಯಾವ ಸುಳ್ಳೊ, ಎಂಥ ಸುಳ್ಳೊ ಅಲ್ಲಿ ಸಿಡಿದು ಹೋಗಬೇಕು. ದೇವರು ಸತ್ಯ, ಸತ್ಯವೇ ದೇವರು, ಹೀಗಿತ್ತು.

ಈಗ ಅದೆಲ್ಲಾ ತಲೆಕೆಳಗಾಗಿದೆ. 'ಸಾವಿರ ಮಾತು ಹೇಳಿದರೇನು? ಒಂದು ಅಕ್ಷರ ಬರೆದು ಕೈ ಸಿಕ್ಕಿಸಿಕೊಳ್ಳಬಾರದು' ಎಂದು ಬುದ್ಧಿ ಹೇಳುತ್ತಾರೆ ಹಿರಿಯರು. ಕಾಗದದ ಮೇಲೆ ಇಲ್ಲದ ಯಾವ ಸಾಲವೂ ಈಗ ಸಾಲವಲ್ಲ. ಸಾಲದ ಮಾತೇಕೆ? ಧರ್ಮ, ಚಂದಾ ಕೊಡಬೇಕಾದರೂ ಪಟ್ಟಿಗೆ ಹೆಸರು ಹತ್ತಿದ ಮೇಲೆಯೆ ಕೊಡಬೇಕೆಂಬ ಬುದ್ಧಿ ಬರುವುದು. ಅಲ್ಲಿಯವರೆಗೆ ಇಲ್ಲ. ಮಗನ್‌ವಾಡಿಯಲ್ಲಿದ್ದ ಕಾಗದದ ಶಾಲೆಯ ಪ್ರಧಾನರು ನನಗೆ ಆಪ್ತರು. ಅವರೊಡನೆ ವಿನೋದಕ್ಕಾಗಿ ಕಾಗದದ ಮಹಿಮೆಯನ್ನು ಚರ್ಚಿಸಿದ್ದೆ. ಆ ನೆನಪಿನಿಂದ ಬರೆಯುತ್ತಿದೇನೆ.

ಅವರ ಹೆಂಡತಿ ಅಲ್ಲೇ ಇದ್ದರು. ನಡುವೆ ಬಾಯಿ ಹಾಕಿ, ನನ್ನ ಪಕ್ಷವನ್ನು ಎತ್ತಿ ಹಿಡಿದರು. 'ಸರ, ನಿಮಗನ್ನೂ ಗೊತ್ತಿಲ್ಲ. ಹೆಂಡತಿಗೂ ಹೇಳಲಾರದ ಗುಟ್ಟನ್ನು ತುಂಡು ಕಾಗದದ ಹೊಟ್ಟೆಗೆ ಸೇರಿಸುತ್ತಾರೆ ಜನ' ಎಂದರು.

"ಹೆಂಡಿರನ್ನು ಕಂಡರೆ ತೀರದ ಅಕ್ಕರೆ ಗಂಡಸರಿಗೆ. ಇದಿರು ಕೂತು ಮಾತಾಡುವಾಗ ಅಕ್ಕರೆಯ ಮಾತು ಒಂದಾದರೂ ಹೊರಡುವುದಿಲ್ಲ. ಅದೇ ಕಾಗದ ಬರೆಯೋಣ ನೋಡಬೇಕು. ಪ್ರೀತಿಯ ಸಪ್ತ ಸಮುದ್ರಗಳೂ ಅಲ್ಲೇ ಪ್ರತ್ಯಕ್ಷ. ಎಲ್ಲಾ ಕಾಗದಕ್ಕೆ ಅರ್ಪಣೆ" ಎಂದು ಆಕೆ ಮಾತು ಮುಗಿಸಿದರು.

ಇಷ್ಟು ಮಹಿಮೆಯುಳ್ಳ ಕಾಗದ ತಯಾರಾಗುವುದು ಕಸದಿಂದ, ಚಿಂದಿ ಬಟ್ಟೆಗಳಿಂದ. ಹುಲ್ಲು, ಕಟ್ಟಿಗೆ ತಿಳಲು (ಪಲ್ಪ್), ಚಿಂದಿಬಟ್ಟೆ ಮುಂತಾದ ಏನೂ ಕೆಲಸಕ್ಕೆ ಬಾರದ ವಸ್ತುಗಳು ಇದರ ಮೂಲಾಧಾರ. ಈ ಪದಾರ್ಥಗಳನ್ನು ನೀರಿನಲ್ಲಿ ನೆನೆಸಿ, ಅವುಗಳಲ್ಲಿರುವ ನಾರನ್ನು ಬಿಡಿಸಿ, ಅಂಟು ಮೊದಲಾದ ಹೊಲಸನ್ನು ಕಳೆದು ಮೊದಲು ಮೆತ್ತಗೆ ಮುದ್ದೆಮಾಡುತ್ತಾರೆ. ಆ ಮುದ್ದೆಯನ್ನು ಯಾತದ ಒನಕೆಯಂಥ 'ಢೇಕಿ'ಯ—ನಮ್ಮಲ್ಲಿನ ಕೊಟ್ಟಣದ ಮಾದರಿ—ಕೆಳಗೆ ಬಲವಾಗಿ ಕುಟ್ಟಿ ಹದಮಾಡುತ್ತಾರೆ. ಹಾಗೆ ಹದವಾದ ಪದಾರ್ಥವನ್ನು ನೀರಿನ ತೊಟ್ಟಿಗಳಲ್ಲಿ ಕಲೆಸಿ ಚೆನ್ನಾಗಿ ಕದಡುತ್ತಾರೆ. ಈ ತೊಟ್ಟಿಗಳು ಇದಕ್ಕಾಗಿಯೇ ಕಟ್ಟಲ್ಪಟ್ಟಿವೆ. ಕಡ್ಡಿಯ ಚಾಪೆಗಳ ಮೂಲಕ ಕಾಗದವನ್ನು ಆ ನೀರಿನಿಂದ ಎತ್ತುತ್ತಾರೆ. ಒಂದೇ ಹದಕ್ಕೆ ಬಂದ ನಾರೆಲ್ಲ ಚಾಪೆಯ ಮೇಲೆ ಹರಡಿಕೊಂಡು, ನೀರು ಸುರಿದುಹೋಗುತ್ತದೆ. ಕಾಗದ ದಪ್ಪನಾಗುವುದು, ತೆಳ್ಳಗಾಗುವುದು ಎಲ್ಲಾ ಇಲ್ಲೇ. ಆಕಾರವೂ ಅಷ್ಟೇ. ಕೈಯಿಂದ ಕಾಗದ ತಯಾರಿಸುವಲ್ಲಿ ಉಳಿದೆಲ್ಲ ಘಟ್ಟಗಳಲ್ಲೂ ಯಂತ್ರದ ಸರಾಗವಿದೆ. ಕಲೆಯೇನಾದರೂ ಇದರಲ್ಲಿದ್ದರೆ ಇಲ್ಲೇ. ಕೈಚಳಕ ಇದ್ದಂತೆ ಕಾಗದ. ಒಬ್ಬೊಬ್ಬರು 'ಕಾಗಜಿ'ಗಳು (ಕಾಗದ ಮಾಡುವ ಹಳೇ ಹುಲಿಗಳು) ಈ ಕಲೆಯನ್ನು ವಶಮಾಡಿಕೊಂಡಿರುವ ರೀತಿ ಆಶ್ಚರ್ಯಕರವಾಗಿದೆ.

ಚಾಪೆಗಳಿಂದ ಅರಿವೆಗಳ ಮೇಲೆ ಒಣಗಲು ಹೋಗುತ್ತದೆ ಕಾಗದ. ಅಲ್ಲಿಂದ ಮುಂದೆ ಅದಕ್ಕೆ ನಯಹಾಕುವುದು, ಕತ್ತರಿಸುವುದು. ಮಗನ್ ವಾಡಿಯಲ್ಲಿ ಕಾಗದ ಮಾಡುವುದನ್ನು ಕಲಿವ ವಿದ್ಯಾರ್ಥಿಗಳು ಮಾಡುವ ಪ್ರಯೋಗಗಳ ಫಲ, ಹೊರೆ ಬಹಳವಾಗಿ ನಯ ಕಡಿಮೆ.

ಕಾಗಜಿಗಳಲ್ಲಿ ಮುಖ್ಯನಾದವನು ಔರಂಗಾಬಾದಿನವನು. ಔರಂಗಾಬಾದಿನಲ್ಲಿ ಕಾಗದದ ಕಸಬು ಇನ್ನೂ ಹೋಗಿಲ್ಲ. ಅಲ್ಲಿ 'ಕಾಗಜಪೂರ್' ಎಂಬ ಬೀದಿಯೇ ಒಂದು ಇದೆ. ಹೈದರಾಬಾದು ಸರಕಾರದ ಕೃಪೆಯಿಂದ

ಆ ಜನ ಇನ್ನೂ ಬದುಕಿದಾರೆ. ಆ ಸರಕಾರದ 'ಜರೀದಾ' (ಗೆಜೆಟ್) ಈ ಕಾಗದದ ಮೇಲೇ ಅಚ್ಚಾಗುತ್ತದೆ. ಯುವರಾಣಿಯ ಭಾಷಣಗಳೆಲ್ಲ ಆ ಕಾಗದದ ಮೇಲೆಯೇ ಅಚ್ಚಾಗುವುದು. ಕೈ ಕಸಬುಗಳನ್ನು ಕಾಪಾಡುವ ರೀತಿಗಳಲ್ಲಿ ಇದೂ ಒಂದು.

ಮಗನ್‌ವಾಡಿಯ ಸಾಬೂನು ಇನ್ನೂ ಎಳೆತನದಲ್ಲಿದೆ. ಅದಕ್ಕೆ ಇನ್ನೂ ಒಂದು ವಿಭಾಗದ ಗೌರವ ಸಿಕ್ಕಿಲ್ಲ.

ಇವೆಲ್ಲ ಪದಾರ್ಥಗಳನ್ನೂ ಅಲ್ಲೇ ಒಂದು ಅಂಗಡಿಯಿಟ್ಟು ಮಾರುತ್ತಾರೆ. ಬೇರೆ ಬೇರೆ ಪ್ರಾಂತಗಳಲ್ಲೂ ಗ್ರಾಮೋದ್ಯೋಗದ ಅಂಗಡಿಗಳನ್ನು ತೆರೆದಿದ್ದಾರೆ. ಕ್ರಮಕ್ರಮವಾಗಿ ದೇಶದಲ್ಲಿ ಈ ವಸ್ತುಗಳ ಬಳಕೆಯನ್ನು ಹೆಚ್ಚಿಸಲಾಗುತ್ತಿದೆ.

ಮಗನ್‌ವಾಡಿಯ ಗುಡಿಸಲುಗಳು ಅಂದವಾಗಿವೆ. ಒಂದು ಪಡಸಾಲೆ, ಎರಡು ಕೋಣೆ, ಅಡಿಗೆಮನೆ, ಬಚ್ಚಲುಮನೆ, ಉಗ್ರಾಣ–ಇಷ್ಟಿರುತ್ತವೆ. ಅಡಿಗೆಯ ಮನೆಯಲ್ಲಿ ನೆಲಕ್ಕೆ ಕಡಪಾಕಲ್ಲು. ಉಳಿದ ಭಾಗ ಮಣ್ಣಿನ ನೆಲ. ಬಚ್ಚಲು, ಪಟ್ಟಣಗಳ ಹೊಸ ಪದ್ಧತಿಗಳಿಗೆ ಸರಿಹೋಗುತ್ತದೆ. ಛಾವಣಿಗೆ ಹೆಂಚು. ಗೋಡೆಗಳಿಗೆಲ್ಲ ಬಿದಿರಿನ ಗಳ, ದಬ್ಬೆ. ಅದಕ್ಕೆ ಮಣ್ಣಿನ ಮೆತ್ತನೆ. ಗುಡಿಸಿಲ ಸುತ್ತಲೂ ಕಟ್ಟಿಗೆಯ ಕಾಂಪೌಂಡು. ಶೌಚಕ್ಕೆ "ಗಾಂಧೀ ಪಾಯಿಖಾನೆಗಳು".

ಒಂದೊಂದು ಗುಡಿಸಲಿಗೆ ೨೦೦ ರೂಪಾಯಿ ಅಂದಾಜು. ಚೆನ್ನಾಗಿ ಬಾಳಿಕೆ ಬರುತ್ತವೆಯೆಂದು ಮಗನ್‌ವಾಡಿಯ ಅನುಭವ. ಇಷ್ಟು ಅಗ್ಗವಾಗಿ ಅಷ್ಟು ಅಂದ ಚೆಂದ, ಸುಖಸೌಕರ್ಯಗಳನ್ನು ಪೂರಯಿಸಿಕೊಳ್ಳುವುದು ಉಳಿದ ಕಡೆ ಕಾಣಬರುವುದಿಲ್ಲ.



# ಗಾಂಧೀಮಠದ ಮಹಂತ

ಜಯಪುರದ ಪ್ರಭುತ್ವದ ಸುಗ್ರೀವಾಜ್ಞೆಯನ್ನು ತಿರಸ್ಕರಿಸಿ, ಸೆರೆಮನೆಯನ್ನು ಸೇರಲು ನಿರ್ಧಾರಮಾಡಿ ಬೊಂಬಾಯಿಯ ತಮ್ಮ ಗೆಳೆಯರ ಸಂದರ್ಶನಕ್ಕೆಂದು ಜಮುನಾಲಾಲರು ಅಲ್ಲಿಗೆ ಬಂದಾಗ ಜುಹೂನಲ್ಲಿರುವ ತಮ್ಮ 'ಜಾನಕೀ ಕುಟೀರ'ದಲ್ಲಿ ಇದ್ದರು. ಅವರ ಹೆಂಡತಿಯ ಹೆಸರಿನಲ್ಲಿ ಆ ಬಂಗಲೆ ಕಟ್ಟಿದಾರೆ. ಸಮುದ್ರಕ್ಕೆ ಅಂಟಿಕೊಂಡೇ ಮನೆ. ಅರ್ಧ ಫರ್ಲಾಂಗಿನೊಳಗಾಗಿಯೇ ನೀರು. ಪ್ರಶಾಂತಸಾಗರವು ತನ್ನ ಅಲೆಗಳೊಂದಿಗೆ ತಾನೇ ಆಟವಾಡುತ್ತಲಿರುತ್ತದೆ. ವರುಣೇಶ್ವರನ ನಿತ್ಯನಾಟ್ಯದ ಆನಂದದಿಂದ ಚಿಮ್ಮುವ ಹತ್ತು ಸಾವಿರ ಭಂಗಿಗಳಂತೆ ಅಲೆಗಳು ನಲಿಯುತ್ತಿರುತ್ತವೆ. ಆ ಅಲೆಗಳ ಮೇಲೇರಿ ನೋಟಕ್ಕೆ ಸಿಗದೆ, ತಿಳಿವಿಗೆ ಸಿಲುಕದೆ, ಅನಂತದ ಭಾವನೆಯೊಂದು ಬಂದು ಮೂಡುತ್ತದೆ. ಬಾಳು ಆಳವೂ ಅಹುದು, ಹರವೂ ಹೌದು. ಗಂಭೀರವಿದ್ದಷ್ಟೇ ವಿಶಾಲ. ಅನಂತವಾರಿಧಿಯಂತೆ ಎನಿಸುತ್ತದೆ. ಕುಟೀರದ ಅಂಗಳದಲ್ಲಿ ಕೂತು ಸಮುದ್ರದ ಕಡೆ ನೋಡುತ್ತಿದ್ದರೆ, ಅದೊಂದು ತೆರನಾದ ಯಕ್ಷಿಣಿಗೆ ವಶವಾದ ಹಾಗಾಗುತ್ತದೆ. ಇತ್ತ ನೆಲ, ಮುಂದೆ ನೀರು, ಹಿನ್ನೆಲೆಗೆ ಆಕಾಶ. ಮೂರೂ ಒಂದರೊಳಗೊಂದು ಹೆಣೆದುಕೊಂಡಿವೆ. ಯಾವುದೂ ಎಲ್ಲೂ ಮುಗಿಯದು. ಹಾಗೆ ಗೆರೆ ಎಳೆಯಲೂ ಬಾರದು. ಅದೊಂದು ರಾಸಕ್ರೀಡೆ. ಮನೆಯ ಮಗ್ಗುಲಲ್ಲಿರುವ ತೆಂಗಿನ ಮರದ ಗರಿಯ ಸಪ್ಪಳದ ಅಪಶ್ರುತಿ ಇರದಿದ್ದರೆ, ಆ ಭಾವ ಸಮಾಧಿಗೆ ಭಂಗ ಕಡಿಮೆ.

ಆ ಅಂಗಳದಲ್ಲಿ ಜಮುನಾಲಾಲರು ಕುಳಿತಿದ್ದರು. ಇದಿರಿನಲ್ಲಿದ್ದ ಮುನ್ನೀರಿನಷ್ಟೇ ಅವರ ಮುಖಮುದ್ರೆಯೂ ಪ್ರಸನ್ನ ಗಂಭೀರ. ಕಣ್ಣಲ್ಲಿ ಸ್ಥಿರತೇಜ. ಸುತ್ತಲೂ ಜನ ಕುಳಿತಿದ್ದರು. ಕೆಲವರು ಸಂಗಡಿಗರು, ಕೆಲವರು ಅನುಯಾಯಿಗಳು. ಜಯಪುರ ಯುದ್ಧದ ಎತ್ತುಗಡೆಗಳ ನೀತಿ ನಿಯಮಗಳ ನಿರ್ಧಾರ ನಡೆದಿತ್ತು. ಅವರ ಗೆಳೆಯರನೇಕರು ತಾವೂ ಅವರನ್ನು ಹಿಂಬಾಲಿಸುವ ಇಚ್ಛೆಯನ್ನು ತೋರಿಸಿದ್ದರು. ಎಷ್ಟೋ ಜನ

ಕಾಗದ ಬರೆದಿದ್ದರು. ಕೆಲವರು ಬಂದೂ ಇದ್ದರು. ಎಲ್ಲರಿಗೂ ಒಂದೇ ಉತ್ತರ. ಜಯಪುರದ ಪ್ರಜೆಯಲ್ಲದವರಿಗೆ ಇದರಲ್ಲಿ ಸ್ಥಾನವಿಲ್ಲ. ಇದು ಮನೆಯ ಮಾತು. ತಂದೆ ಮಕ್ಕಳ ಜಗಳ. ಹೊರಗಿನವರಿಗೆ ಸಂಬಂಧ ವಿಲ್ಲ. ಕುಟುಂಬದ, ವ್ಯವಹಾರದ ಮಾತೂ ನಡೆದಿದ್ದವು. ಮತ್ತೆ ಎಂದೋ ಏನೋ! ಎಲ್ಲ ಪ್ರಶ್ನೆಗಳನ್ನೂ ಕೇಳಿಡಬೇಕು. ಎಲ್ಲ ಸೂಚನೆಗಳನ್ನೂ ತಿಳಿದುಕೊಳ್ಳಬೇಕು.

ಈ ಎಲ್ಲವೂ ನಡೆದಿದ್ದರೂ ಜಮುನಾಲಾಲರ ಜೀವ ಎಲ್ಲೋ ಒಳ ಗೊಳಗೇ ಸುಳಿದಾಡುವಂತಿತ್ತು. ಮಹತ್ವಾದ ಮಾತುಗಳ ನಿರ್ಣಯ. ಜಟಿಲವಾದ ಸಮಸ್ಯೆಗಳ ವಿಚಾರ. ಆದರೂ ಮಾತನ್ನು ಮೀರಿ ಚರ್ಚೆ ಯನ್ನು ದಾಟಿ ಆಳವಾದ ಅನಂತದಲ್ಲಿ ಮುಳುಗಿದಂತಿತ್ತು, ಅವರ ಸ್ಥಿತಿ. ಅವರು ತಮ್ಮ ಬಾಳಿನೊಡನೆ ತಾವೇ ಆಟವಾಡುತ್ತಿದ್ದರು. ಆಸಕ್ತಿ–ಅನಾ ಸಕ್ತಿಗಳ ನಡುವೆ ನಿಂತು ಕಾದಿ, ಕದನವಾಡಿ, ಅನಾಸಕ್ತಿಯ ಹೊಸಲಿನ ಮೇಲೆ ಕೂತಂತಿತ್ತು ಅವರ ಮನಸ್ಸು. ಅಪಾರವಾದ ಐಶ್ವರ್ಯ. ವಿಸ್ತಾರ ವಾದ ಹೊಲಮನೆಗಳ ವ್ಯವಹಾರ. ವಿಶಾಲವಾಗಿ ಹರಡಿದ್ದ ವ್ಯಾಪಾರ. ಎಲ್ಲ ವನ್ನೂ ಕ್ರಮವಾದ ಒಂದು ವ್ಯವಸ್ಥೆಗೆ ಒಳಪಡಿಸಿ, ಯೋಗ್ಯ ವ್ಯವಸ್ಥಾಪಕ ರನ್ನು ಮೇಲ್ವಿಚಾರಣೆಗೆ ನೇಮಿಸಿ, ಹರೆಯಕ್ಕೆ ಬಂದ ಮಗನಿಗೆ ಸೂತ್ರಗಳ ನ್ನೆಲ್ಲಾ ವಹಿಸಿ ಅವರು ಆಸಕ್ತಿಯನ್ನು ಸೋಲಿಸಿದಾರೆ. ಜಮುನಾಲಾಲರ ಆತ್ಮಗರುಡ ಗರಿಗೆದರಿ ಕೂತಿದಾನೆ. ರೆಕ್ಕೆ ಇನ್ನೂ ಬಲಿಯಬೇಕು. ಈ ಮನೋವೃತ್ತಿಯೇ ಅವರನ್ನು ಕೆಲವು ದಿನದ ಕೆಳಗೆ ಶ್ರೀ ರಮಣಮಹರ್ಷಿ, ಅರವಿಂದಘೋಷರ ಬಳಿಗೆ ಸೆಳೆದದ್ದು.

ವರ್ಧಾದಲ್ಲಿ ಮೊದಲು ನೋಡಿದಾಗಲೇ ಅವರ ಬಾಳಿನಲ್ಲಿ ಮೌನ ವಾಗಿ ಮಿಡಿಯುತ್ತಿದ್ದ ಈ ಶ್ರುತಿಯನ್ನು ಗುರುತಿಸಿಕೊಂಡೆ. ಅವರ ಎಲ್ಲ ಆಚರಣೆಗಳೂ ಕಾರ್ಯಕ್ರಮಗಳೂ ಈ ಶ್ರುತಿಗೆ ಸಮರಸವಾಗಿ ನಡೆಯು ತ್ತವೆ. ಗಾಂಧೀಜಿಯ ಸರ್ವತೋಮುಖ ಸೃಷ್ಟಿಯಲ್ಲಿ ಜಮುನಾಲಾಲರದೇ ಒಂದು ವಿಶಿಷ್ಟ ಜಾತಿ. ಅವರೊಬ್ಬರದೇ ಆ ವ್ಯಕ್ತಿತ್ವ.

ಜಮುನಾಲಾಲರ ಕೊಡುಗೈ ಹಿಂದುಸ್ಥಾನಕ್ಕೆ ಚೆನ್ನಾಗಿ ಗುರುತಾಗಿದೆ. ಅಸಹಕಾರದ ದಿನಗಳಲ್ಲಿ ವಕೀಲಿ ಬಿಟ್ಟುಕೊಟ್ಟ ದೇಶಸೇವಕರಿಗಾಗಿ ಅವರು

ನೀಡಿದ ಒಂದು ಲಕ್ಷ ರೂಪಾಯಿಗಳ ನಿಧಿಯೇ ಮುಂದೆ ತಿಲಕ ಸ್ವರಾಜ್ಯ ನಿಧಿಯಾಗಿ ಬೆಳೆಯಿತು. ಒಂದು ಲಕ್ಷ ಬೆಲೆ ಬಾಳುವ ಮಗನ್‌ವಾಡಿಯ ತೋಟ ಅವರದು. ಗಾಂಧೀಜಿಯ ಆರ್ಥಿಕ ಕಾರ್ಯಕ್ರಮಗಳ ಪ್ರಯೋಗಕ್ಕಾಗಿ ಅದು ದತ್ತವಾಗಿದೆ.

ಮಹಾತ್ಮರ ಈಗಿನ ಆಶ್ರಮವಿರುವ ಸೇವಾಗ್ರಾಮ ಅವರ ಸೊತ್ತು. ಸಾಬರ್ಮತಿಯ 'ಉದ್ಯೋಗ ಮಂದಿರ'ವನ್ನು ತ್ಯಾಗ ಮಾಡಿ ಸ್ವರಾಜ್ಯ ಸಿಗುವವರೆಗೆ ಅಲ್ಲಿ ಕಾಲಿಡೆನೆಂದು ಶಪಥತೊಟ್ಟು ಮಹಾತ್ಮರು ಇಡೀ ಹಿಂದುಸ್ಥಾನವನ್ನೇ ನಡುಗಿಸಿದಾಗ ಅವರಿಗೆ ವಸತಿ ಕಲ್ಪಿಸಿದುದು ಜಮುನಾಲಾಲರು. ರಾಷ್ಟ್ರಸೇವೆಯಲ್ಲಿ ಮನೆ ಮುರಿದುಕೊಂಡ ಕೆಲಸಗಾರರ ಮಕ್ಕಳಿಗಾಗಿ ಆಶ್ರಯಸ್ಥಾನವನ್ನು ಕಟ್ಟಿದುದು ಅವರ ಉದಾರ ಸ್ವಭಾವ. ಅದೇ ಇಂದು ಅತ್ಯುತ್ತಮವಾದ ಮಹಿಳಾಶ್ರಮವಾಗಿದೆ. ಓದುವ ಹುಡುಗರಿಗೆ ಛಾತ್ರವೃತ್ತಿ, ವಿದ್ಯಾರ್ಥಿ ವೇತನ, ಆಪದ್ಗ್ರಸ್ತರಿಗೆ ಸಹಾಯ, ರಾಷ್ಟ್ರಕಾರ್ಯಕ್ಕೆ ಪ್ರೋತ್ಸಾಹ, ಕಾರ್ಯಕರ್ತರಿಗೆ ಅನುಕೂಲ—ಇತ್ಯಾದಿ ಕ್ಷೇತ್ರಗಳಲ್ಲಿ ಅವರ ಔದಾರ್ಯ ಎಷ್ಟು ಆಳವಾಗಿ ಹರಿದಿದೆ ಎಂಬುದನ್ನು ತಿಳಿಯುವುದು ಕೂಡ ದುಸ್ಸಾಧ್ಯ.

ಮೇಲು—ಕೀಳು ಎಂಬ ಭಾವನೆ ಅವರಲ್ಲಿಲ್ಲ. ಹಿರಿಯರು ಕಿರಿಯರೆಂಬ ಗೋಡೆಯಿಲ್ಲ. ಅವರ ಅಪಾರವಾದ ವ್ಯವಹಾರದಲ್ಲಿ ಎಷ್ಟೋ ಜನ ಕೆಲಸಗಾರರು ತೊಡಗಿದ್ದಾರೆ. ಯಾರಿಗೂ ಅವರ ಅಧಿಕಾರದ ಕೋಂಡಿಯ ಪರಿಚಯವಾಗಿಲ್ಲ. ಬಜಾಜವಾಡಿ, ಬಜಾಜ ವ್ಯವಹಾರ—ಎಲ್ಲಾ ಒಂದು ಕುಟುಂಬವಿದ್ದಂತೆ. ಅವರು ಯಜಮಾನರು. ಈ ಮಟ್ಟವನ್ನು ದಾಟಿ ಯಾರ ಭಾವನೆಯೂ ಹೋಗದಂತೆ ಬಜಾಜರು ಜೀವನವನ್ನು ನಡೆಸಿದಾರೆ. ಅವರೆಲ್ಲರ ಮದುವೆ—ಮುಂಜಿ, ಮನೆ—ಮಾರು, ಅಂತರಂಗದ ಸಮಸ್ಯೆಗಳು—ಎಲ್ಲವೂ ಅವರಲ್ಲಿ ಚರ್ಚೆಯಾಗಬೇಕು. ಅವರ ಸೂಚನೆಯಂತೆ ಎಲ್ಲರೂ ನಿರ್ಣಯಿಸಿಕೊಳ್ಳುತ್ತಾರೆ. ಯಾರಿಗೂ ಅವರು 'ಸೇಠಜೀ' ಆಗಿಲ್ಲ. ಎಲ್ಲರಿಗೂ 'ಕಾಕಾಜೀ'. ಇದೇ ಅವರ ಸೌಜನ್ಯದ ಸೂತ್ರ.

ಅತಿಥಿ ಭವನದಲ್ಲಿ ಕೂತು 'ಧನಿಕರೆಲ್ಲ ಜಮುನಾಲಾಲರಾಗಬಾರದೇಕೆ? ಕೆರೆಯಲ್ಲಿ ನೀರು ನಿಂತರೆ ಹೊಲಕ್ಕೆ ಹೆದರಿಕೆಯೇನು? ಅಡ್ಡ

ಯೇನು ?' ಎಂದು ನನ್ನನ್ನು ನಾನೇ ಕೇಳಿದೇನೆ. 'ಇಂಥ ತ್ಯಾಗಿಗಳನ್ನು ನೋಡಿಯೇ ಇರಬೇಕು, ಹಣವಂತಿಕೆ ರಾಷ್ಟ್ರವಿಕಾಸಕ್ಕೆ ಅಹಿತವಲ್ಲವೆಂದು ಗಾಂಧೀಜೀ ನಿರ್ಣಯಕ್ಕೆ ಬಂದುದು' ಎಂದುಕೊಂಡಿದೇನೆ.

ಆದರೆ ಜಮುನಾಲಾಲರ ಜೀವನದಲ್ಲಿ ಅವರ ತ್ಯಾಗ, ದಾನಗಳು ಅಷ್ಟು ಪ್ರಧಾನವಲ್ಲ. ಅವರ ಬಾಳಿಗೆ ಒಣ್ಣ ಕೊಟ್ಟದ್ದು ಅವರ ವಜ್ರ ಹೃದಯ, ವಿರಕ್ತ ಸ್ವಭಾವ, ವಿಶಾಲ ದೃಷ್ಟಿ, ಧೀರ ಶಾಂತತೆಗಳು. ರಾಷ್ಟ್ರ ಹಿತಕ್ಕಾಗಿ ಅವರು ಮಾಡಿದ ಮೂಕಸೇವೆ ಅವರಿಗೆ ಈಗಿರುವ ಸ್ಥಾನಮಾನ ವನ್ನು ಕೊಟ್ಟಿದೆ. ಗಾಂಧೀಜಿಯ ತತ್ವದಲ್ಲಿ ಅವರಿಗಿರುವ ಅಚಲ ಶ್ರದ್ಧೆಯೇ ಅವರ ಜೆಳಕಾಗಿದೆ. ಮಾರವಾಡೀ ಸಮಾಜದಲ್ಲಿ ಸುಧಾರಣೆಗಳನ್ನು ತರಲು ಅವರು ಮಾಡಿದ ಪ್ರಯತ್ನ, ಪಟ್ಟ ಕಷ್ಟನಷ್ಟ, ಕೊಟ್ಟ ಬಲಿದಾನ, ಅವರ ಬಾಳನ್ನು ಗಟ್ಟಿಮಾಡಿವೆ.

ಇಂದಿನ ಹಿಂದುಸ್ಥಾನದ ಅನೇಕ ನಾಯಕರಿಗೆ ಗಾಂಧೀಜಿ ಗುರು ಗಳಾಗಿ 'ಪುನರ್ಜನ್ಮ' ಕೊಟ್ಟಿದಾರೆ. ಆ ಗಾರುಡಿಗನ ಕೈಚಳಕದಿಂದ ಕಸವೆಷ್ಟೋ ರಸವಾಗಿದೆ. ಜಮುನಾಲಾಲರೂ ಮೊದಲು 'ಟೊಳ್ಳು' ಜಾತಿಗೆ ಸೇರಿದವರೆ. ಆಗರ್ಭ ಶ್ರೀಮಂತರಾಗಿ ಸುಖಭೋಗಗಳಲ್ಲಿ ನಿರತ ರಾಗಿದ್ದವರು. ಪಕ್ಕಾ ಸೇಠರಂತೆ ಹಣ ಗಳಿಸುವುದರಲ್ಲಿ ತೊಡಗಿದ್ದರು. ಅಧಿಕಾರಿಗಳ ಅನುಗ್ರಹಕ್ಕೆ ಪಾತ್ರರಾಗಿ ಹರೆಯದಲ್ಲೇ ರಾವ್ ಬಹದೂರಿ ಯನ್ನು ಪಡೆದುಕೊಂಡಿದ್ದರು. ಬಿಟ್ಟೀ ಮೆಜಿಸ್ಟ್ರೇಟರ ಒಂದು ಗೌರವದ ಕೆಲಸವೂ ಅವರ ಕೊರಳಿಗೆ ಬಿದ್ದಿತ್ತು. ಆ ಏಣಿಯನ್ನೇ ಹತ್ತಿದ್ದರೆ ಈಗ ಇವರು ಸರ್ ಇತ್ಯಾದಿ ಆಗಬಹುದಾಗಿತ್ತು. ಆದರೆ ಗಾಂಧೀಜಿಯ ರಣದುಂದುಭಿ ಇವರನ್ನು ಬೇರೆ ಹಾದಿಗೆ ಕರೆಯಿತು. ಸುಖ–ಭೋಗಗಳ ನಡುವೆ ಇದ್ದರೂ ಜಮುನಾಲಾಲರಿಗೆ ಆ ಕರೆ ಕೇಳಿಸದಿರಲಿಲ್ಲ. ಆ ವಿರಕ್ತ ಸ್ವಭಾವಕ್ಕೆ ಇದರಲ್ಲೊಂದು ಬೆಳಕು ಕಂಡಿತು. ಅಂದಿನಿಂದ ಇಂದಿನವರೆಗೆ ಅವರು ಮಾಡಿದ ರಾಷ್ಟ್ರಸೇವೆ ಅಮೂಲ್ಯವಾದುದ್ದು.

ಗಾಂಧೀಜಿಯಲ್ಲಿ ಅವರಿಗೆ ಅಪಾರ ವಿಶ್ವಾಸ, ಭಕ್ತಿ. ಗಾಂಧೀಜಿಯ ರಾಜಕೀಯ ನೀತಿಯಲ್ಲಿ ಬಲವಾದ ನಂಬಿಗೆ, ನಿರ್ಮಾಣ ಕಾರ್ಯಕ್ರಮದಲ್ಲಿ ಒಲವು. ಖಾದೀಕಲೆಗೆ ಸ್ಥಿರಸ್ವರೂಪ ಕೊಡುವುದಕ್ಕಾಗಿ ಬಹಳ ದುಡಿದಿ

ದಾರೆ. ಗಾಂಧೀಜೀ ಮೊದಲು ಸೆರೆಮನೆಗೆ ಹೋದಾಗ ಅವರೇ ಖಾದೀ ಕಾರ್ಯದ ಹೊಣೆ ಹೊರಲು ಮುಂದೆಬಂದವರು. ಹರಿಜನ ಸೇವೆಯಲ್ಲೂ ಅವರ ಕೈ ಪಳಗಿದೆ. ಈಗಂತೂ ಗಾಂಧೀಜಿಯ ಅನೇಕ ಕನಸುಗಳನ್ನು ರೂಪಕ್ಕೆ ತರುವ ರೂವಾರಿಯಾಗಿದಾರೆ. ಅಂತೇ ಅವರನ್ನು ಗಾಂಧೀ ಮಠದ ಮಹಂತರೆಂದು ನಾನು ಕರೆದದ್ದು.

೧೯೨೧ರ, ಆ ಮರೆಯಲಾಗದ ಕಾಂಗ್ರೆಸ್ಸಿನ ಕಾಲಕ್ಕೆ ಜಮುನಾ ಲಾಲರು ಮೊದಲು ರಾಷ್ಟ್ರಸಭೆಗೆ ಸೇರಿದುದು. ನಾಗಪುರದಲ್ಲಿ ಆಗ ಕಾಂಗ್ರೆಸ್ಸು. ಅದಕ್ಕೆ ಅವರು ಸ್ವಾಗತಾಧ್ಯಕ್ಷರಾಗಿದ್ದರು. ಕಾಂಗ್ರೆಸ್ಸಿಗೆ ಸೇರಿದ್ದೇ ತಡ, ಯುದ್ಧಕ್ಕೇ ತೊಡಗಬೇಕಾಯಿತು. ಸುಖ, ಸಂಪತ್ತು, ಪದವಿ ಎಲ್ಲವನ್ನು ಬಿಟ್ಟು ಸತ್ಯಾಗ್ರಹ ಸೇನೆಯ ಸಾಮಾನ್ಯ ಸಿಪಾಯಿಯಾಗಿ ಸಿದ್ಧವಾದರು. ಇಡೀ ಹಿಂದುಸ್ಥಾನದಲ್ಲಿ ಶಾಸನೋಲ್ಲಂಘನಕ್ಕೆ ಮಾರ್ಗ ವನ್ನು ಪರಿಶೀಲಿಸಲು ೧೯೨೨ರಲ್ಲಿ ಒಂದು ಸಮಿತಿ ಏರ್ಪಾಟಾಯಿತು. ಅವರು ಭಾರತವನ್ನೆಲ್ಲ ಸುತ್ತಿ ಬಂದು ಕೆಲವು ಸೂಚನೆಗಳನ್ನು ಮಾಡಿದರು. ಆ ಸಮಿತಿಯಲ್ಲಿ ಜಮುನಾಲಾಲರೂ ಒಬ್ಬರು. ಮಾರನೆ ವರ್ಷವೇ ನಾಗಪುರ ದಲ್ಲಿ ಧ್ವಜಸತ್ಯಾಗ್ರಹ ನಡೆಯಿತು. ಅದಕ್ಕೆ ಜಮುನಾಲಾಲರೇ ಮುಂ ದಾಳು. ಸೆರೆಮನೆಯಲ್ಲಿ ೮–೧೦ ಸೇರು ಪವಸವನ್ನು ಒಬ್ಬರೇ ಬೀಸಬೇಕಾ ಗುತ್ತಿತ್ತು. ಆದರ್ಶ ಸತ್ಯಾಗ್ರಹಿಯಂತೆ ಅದನ್ನು ಸಹಿಸಿಕೊಂಡರು. ಅವ ರಿಗೆ ಕೊಟ್ಟ ಶಿಕ್ಷೆಯಲ್ಲಿ ದಂಡವೂ ಇತ್ತು. ಸರಕಾರ ಅವರ ಮೋಟಾರನ್ನು ಸ್ವಾಧೀನ ಪಡಿಸಿಕೊಂಡು ಅದನ್ನು ಮಾರಿ, ದಂಡದ ಹಣವನ್ನು ಸಲ್ಲಿಸಿ ಕೊಳ್ಳುವ ಪ್ರಯತ್ನ ಮಾಡಿತು. ಇಡೀ ಜಿಲ್ಲೆಯಲ್ಲಿಯೆ ಅದನ್ನು ಕೊಳ್ಳುವ ಕಲ್ಲೆದೆಯ ಪ್ರಾಣಿ ಯಾರೂ ಮುಂದೆ ಬರಲಿಲ್ಲ. ಎಲ್ಲಿಗೋ ಪರಪ್ರಾಂತ ಕ್ಕೊಯ್ದು ಅದನ್ನು ಮಾರಿದರಂತೆ.

ಮುಂದಿನ ಸಮರದಲ್ಲಿ ಹೆಂಡತಿ ಮಕ್ಕಳೊಡನೆ ರಂಗದಲ್ಲಿಳಿದರು. ಕಾಂಗ್ರೆಸ್ಸಿನ ವರ್ಕಿಂಗ್ ಕಮಿಟಿಯಲ್ಲಿ ಬಹಳ ದಿನಗಳಿಂದಲೂ ಇದಾರೆ. ಕಾಂಗ್ರೆಸ್ಸಿನ ಕೋಶಾಧಿಕಾರಿಯ ಪಟ್ಟ ಆಗಿನಿಂದಲೂ ಇವರಿಗೇ ಕಟ್ಟಲ್ಪಟ್ಟಿದೆ. ಆದರೂ ಆ ಸಮಿತಿಯ ಕಾರ್ಯಕಲಾಪಗಳಲ್ಲಿ ಇವರು ಹೆಚ್ಚು ಗದ್ದಲಕ್ಕೆ ಹೋಗಿಲ್ಲ. ಮೊದಲೇ ಮಿತವರಿತು ಮಾತು ಆಡುವ ಸ್ವಭಾವ. ಚರ್ಚೆಗಿಳಿ



ಶ್ರೀಮತಿ ಜಾನಕಿದೇವಿ ಬಜಾಜ್.

ಯುವುದು ಕಡಮೆ. ಆದರೆ ಅಂಥವುಗಳು ಕಾರ್ಯರಂಗಕ್ಕೆ ಇಳಿದರೆ ಅವರದೇ ಮೊದಲನೆ ಹೆಜ್ಜೆ. ಎರಡನೆಯ ಸತ್ಯಾಗ್ರಹದಲ್ಲಿ ಸರದಾರರು ಸೆರೆಯಾದ ಮೇಲೆ ಕಾಂಗ್ರೆಸ್ಸಿನ ಹಂಗಾಮಿ ಅಧ್ಯಕ್ಷರಾಗಿದ್ದರು. ಈಗಲೂ ಮಧ್ಯ ಪ್ರಾಂತದಲ್ಲಿ ಅವರ ಮಾತಿಗೆ ಇದುರಿಲ್ಲ.

ಹಿಂದೂ ಮುಸ್ಲಿಮ್ ಐಕ್ಯ, ವರ್ಣಾಂತರ ಸೌಹಾರ್ದ, ಇವುಗಳಿಗಾಗಿ ಜಮುನಾಲಾಲರ ಪ್ರಯತ್ನಗಳು ಅನೇಕ ವಿಧದಲ್ಲಿ ನಡೆದಿವೆ. ಭಿನ್ನ ಪ್ರಾಂತಗಳಲ್ಲಿ–ಭಿನ್ನ ವರ್ಣಗಳಲ್ಲಿ, ಬೇರೆಬೇರೆ ಶಾಖೆಗಳಲ್ಲಿ ಸಂಬಂಧಗಳನ್ನು ಗಂಟುಹಾಕಿ 'ರಾಷ್ಟ್ರೀಯ ವಿವಾಹ'ಗಳನ್ನು ಮಾಡಿದಾರೆ. ಇದರ ಫಲ ವಾಗಿ ಅವರಿಗೆ 'ಷಾದಿಲಾಲ್'* ಎಂಬ ಅಡ್ಡ ಹೆಸರು ಬಂದಿದೆ. ದೇವದಾಸ ಗಾಂಧಿ, ರಾಮದಾಸ ಗಾಂಧಿಯ ಮದುವೆಗಳಲ್ಲಿ ಅವರ ಕೈವಾಡ. ಗಡಿನಾಡಿನ ಪ್ರಧಾನಿ ಡಾ|| ಖಾನರ ಮಗ ಬೊಂಬಾಯಿಯ ಶ್ರೀಮತಿ ಸಫಿಯಾ ಸೋಮ್ಜಿಯ ಕೈಹಿಡಿದಿದಾರೆ. ಅವರು ಪಠಾನರು, ಇವರು ಬೋಹ್ರಾಜಾತಿ. ಇದಕ್ಕೆ ಕಾರಣ ಜಮುನಾಲಾಲರು. ಪ್ರಸಿದ್ಧಿಗೇರದ ಮದುವೆಗಳೂ ಇಂಥವು ಎಷ್ಟೋ ಆಗಿವೆ.

ರಾಷ್ಟ್ರಸೇವೆಯ ಮಬ್ಬಿನಲ್ಲಿ ಇವರು ತಮ್ಮ ಜಾತಿಯ ಸೇವೆಯನ್ನು ಮರೆತಿಲ್ಲ. ಮಾರವಾಡೀ ಸಮಾಜದಲ್ಲಿ ಹೇರಳವಾಗಿ ಸುಧಾರಣೆಗಳನ್ನು ತಂದಿಟ್ಟದಾರೆ. ಇವರ ಈ ಉತ್ಸಾಹಕ್ಕಾಗಿ ಎಷ್ಟೋ ಸಲ ಪುರಾತನ ಸಂಪ್ರದಾಯವಾದಿಗಳ ಅಂಗಾರಕ ದೃಷ್ಟಿಗೆ ಗುರಿಯಾಗಬೇಕಾಯಿತು. ಆದರೂ ಎದೆಗುಂದದೆ ಇನ್ನೂ ಆ ಹಾದಿಯಲ್ಲೇ ಇದಾರೆ. ಜಮುನಾ ಲಾಲರು ಬಹಳ ಮೆದು. ಬಹಳ ಶಾಂತ. ಆದರೆ ಒಮ್ಮೆ ಹಟತೊಟ್ಟರೆ ಆಯಿತು, ಚಾಣಕ್ಯಶಪಥ. ಬಾಳಿನಲ್ಲಿ ಎಷ್ಟು ಸರಳವೋ ಅಷ್ಟೇ ಕಠೋರ ಸಂಯಮ. ರಾಜ ಮಹಾರಾಜರಂತೆ ಬದುಕುವ ಅನುಕೂಲವಿದೆ. ಆಸೆಯೂ ಇತ್ತು. ಗಾಂಧೀಯುಗದಲ್ಲಿ ಆದರ್ಶ ಗೃಹಸ್ಥನಂತೆ, ಆದರ್ಶ ಸತ್ಯಾಗ್ರಹಿ ಯಂತೆ ಇರುವ ಹಟತೊಟ್ಟ ಮೇಲೆ ಎಲ್ಲಕ್ಕೂ ಎಳ್ಳುನೀರು ಬಿಟ್ಟರು. ಸತ್ಯಾಗ್ರಹವು ಸರಕಾರದೊಡನೆ ಹೊಡೆದಾಡುವ ಶಸ್ತ್ರವಲ್ಲ. ಅದೊಂದು ಜೀವನದ ರೀತಿ, ಹಾದಿ. ಅದು ಜೀವನದ ಮೂಲ ತತ್ವ. ಹೀಗೆ

* ಮದುವೆ ಮಧ್ಯಸ್ಥಗಾರ.

ಗಾಂಧೀಜೀ ಹೇಳಿದಾರೆ, ಹೇಳುತ್ತಾರೆ. ಜಮುನಾಲಾಲರನ್ನು ನೋಡಿ ಅದು ನಿಜ ಎನಿಸುತ್ತದೆ. ಅಷ್ಟೇ ಅಲ್ಲ. ಸತ್ಯಾಗ್ರಹವು ಅಸಿಧಾರಾವ್ರತ ಎನ್ನುವುದೂ ಮನವರಿಕೆಯಾಗುತ್ತದೆ.

ಜಮುನಾಲಾಲರಿಗೆ ಅಷ್ಟಾಗಿ ವಿದ್ಯಾಭ್ಯಾಸವಾಗಿಲ್ಲ. ಆಗದಿದ್ದುದೇ ಒಳ್ಳೆಯದಾಯಿತೆಂದು ತೋರುತ್ತದೆ. ವಿದ್ಯೆ ಬೆಳೆದರೆ ಬಾಳಿನಲ್ಲಿ ಶ್ರದ್ಧೆ, ಗೌರವ ಕಡಮೆಯಾಗುತ್ತದೆ. ಜೀವನವು ಬರೀ ಒಣ ವ್ಯವಹಾರವಾಗಿಬಿಡುತ್ತದೆ. ಜಮುನಾಲಾಲರಿಗೆ ಎದೆ ತುಂಬ ಧೈರ್ಯವಿದೆ. ಜೀವನದ ವೈಶಾಲ್ಯದಲ್ಲಿ ನಂಬಿಕೆಯಿದೆ. ಆದರ್ಶವನ್ನು ಸಾಧಿಸಿಯೇನು ಎಂಬ ದೃಢವೂ ಇದೆ. 'ಸಂಶಯಾತ್ಮ'ವಾದ ಬುದ್ಧಿಯನ್ನು ಮೀರಿ 'ಶ್ರದ್ಧಾ ಯೋಗ'ದಲ್ಲಿ ಸಿರತರಾಗುವ ಈ ಅವಕಾಶ ಆಗ ಇರುತ್ತಿರಲಿಲ್ಲವೇನೋ!

ಆದರೂ ಇವರು ಟೀಕೆ-ಅಪನಿಂದೆಗಳಿಗೆ ಗುರಿಯಾಗದಿಲ್ಲ. ಸಾವಿರ ನಾಲಗೆಗಳ ಕಾಲ ಇದು. ಕಾಂಗ್ರೆಸ್ಸಿನ ಹಣದ ಬಗ್ಗೆ-ಇನ್ನೂ ಕೆಲವು ಮಾತಿನ ಬಗ್ಗೆ ಜನ ಇವರನ್ನು ನಿಂದಿಸಿದರು. ಜಮುನಾಲಾಲರು ಎಲ್ಲರನ್ನೂ ಇದಿರಿಸಿ, ಇದಿರಾಳಿಗಳಿಗೆ ಉತ್ತರಕೊಟ್ಟು, ಎಲ್ಲರಿಂದ ಕ್ಷಮಾಪಣೆ ಬೇಡಿಸಿಕೊಂಡಿದಾರೆ.

ಇನ್ನೂ ಐವತ್ತು ವರ್ಷ. ಒಳ್ಳೇ ದೃಢಕಾಯ. ಜಮುನಾಲಾಲರ ಚಿಕ್ಕೆ ಇನ್ನೂ ಮೇಲೇರುವುದರಲ್ಲಿ ಸಂದೇಹವಿಲ್ಲ.



# ಸಂಯಮಿ ಶ್ರೇಷ್ಠ

ವಿನೋಬಾ ಪೌನಾರಿನಲ್ಲಿದ್ದುದು ಆರೋಗ್ಯ ವರ್ಧನಕ್ಕಾಗಿ. ವರ್ಧಾಕ್ಕೆ ೧೦ ಮೈಲು ದೂರವಲ್ಲಿದೆ ಈ ಹಳ್ಳಿ. ನಾಗಪುರದಿಂದ ವರ್ಧಾಕ್ಕೆ ರೈಲು ದಾರಿಯಲ್ಲಿ ಬಂದರೆ ಪೌನಾರ್ ಒಂದು ಸ್ಟೇಷನ್. ಊರು ದೊಡ್ಡದು. ೫೦೦ ಮನೆಗಳಿಗೇ ಮಹಾಗ್ರಾಮವೆನಿಸಿಕೊಳ್ಳುವ ನಮ್ಮ ದೇಶದ ಹಳ್ಳಿಗಳ ರೀತಿಯಿಂದ ಉತ್ತರ ದೇಶದ ಹಳ್ಳಿಗಳನ್ನು ನಾವು ಲೆಕ್ಕ ಹಾಕಬಾರದು. ಜನಸಂಖ್ಯೆಯಮೇಲೆ ಹಳ್ಳಿಗಳನ್ನು ನಿರ್ಣಯಿಸುವುದಿಲ್ಲ ಜನ. ನಾಗರಿಕತೆಯಮೇಲೆ, ಕಚೇರಿಗಳಮೇಲೆ ಲೆಕ್ಕ ಹಿಡಿಯುತ್ತಾರೆ. ಪೌನಾರ್ ದೊಡ್ಡ ಹಳ್ಳಿ. ಊರ ಮುಂದೆ ಸಣ್ಣದೊಂದು ಹೊಳೆ ಹರಿಯುತ್ತದೆ. ಅದರ ಹೆಸರು ಧಾಮ್ ಇರಬೇಕು. ಈ ಹಳ್ಳಿಯಲ್ಲಿ ಜಮುನಾಲಾಲರಿಗೆ ಕೆಲವು ಹೊಲ ಇವೆ. ಊರ ಮುಂದಿನ ಹೊಳೆಗೆ ಆತುಕೊಂಡು ಸೇಠಜಿಯ ಬಂಗಲೆಯೊಂದಿದೆ. ಸಾದಾ ಬಂಗಲೆ. ಯಾವಾಗಲಾದರೂ ಬಂದರೆ ಇಳಿಯಲು ಕಟ್ಟಿದುದು. ಮೌನವಾಗಿ ಹರಿಯುವ ನೀರು, ಸುತ್ತಲೂ ಹಸುರಿನ ಬಯಲು. ದೂರದಲ್ಲಿ ಕಾಣುವ ಗುಡ್ಡಗಳ ಸಾಲು. ಇವೆಲ್ಲದರ ಮೇಲೆ ಅಭಯಹಸ್ತದಂತೆ ಕವಿದಿರುವ ನೀಲಿ ಮುಗಿಲು. ಬಂಗಲೆಯು ನಿಜವಾಗಿಯೂ ರಮಣೀಯವಾಗಿದೆ.

ಒಂದು ವರ್ಷದ ಕೆಳಗೆ ವಿನೋಬಾ ಬಹಳ ಬೇನೆ ಬಿದ್ದರು. ಆ ಹೊಡೆತದಿಂದ ಇನ್ನೂ ತೆಪ್ಪರಿಸಿರಲಿಲ್ಲ. ಆರೋಗ್ಯಕ್ಕಾಗಿ ವರ್ಧಾದಿಂದ ಪೌನಾರಿಗೆ ಅವರನ್ನು ಕಳುಹಿಸಲಾಯಿತು. ಒಬ್ಬರಿಬ್ಬರು ಶಿಷ್ಯರು ಮಾತ್ರ ಅವರ ಪರಿವಾರ. ವಿನೋಬಾಗೆ ಮದುವೆಯಿಲ್ಲ. ಗಾಂಧೀಜಿಯ ಸಾಬರ್ಮತಿ ಆಶ್ರಮವನ್ನು ಸೇರಿದಾಗಲೇ ಅವರು ಬ್ರಹ್ಮಚರ್ಯ ವ್ರತವನ್ನು ಹಿಡಿದರು. ಇಂದಿಗೂ ಬ್ರಹ್ಮಚಾರಿಗಳಾಗಿಯೇ ಇದ್ದಾರೆ, ಬ್ರಹ್ಮಚರ್ಯವು ಅವರಿಗೆ ಕೇವಲ ಮದುವೆಯಾಗದಿರುವ ಒಂದು ಆರ್ಥಿಕೋಪಾಯವಲ್ಲ. ಸಂಸಾರದ ಹೊರೆಯನ್ನು ತಪ್ಪಿಸಿಕೊಂಡು ಸುಖವಾಗಿರ



ಜಮುನಾ ಕುಟೀರ–ವಿನೋಬಾಜಿಯ ನಿವಾಸ

ಬಹುದಾದ ನಾಗರಿಕ ತಂತ್ರವೂ ಅಲ್ಲ. ಸಂತಾನ ನಿರೋಧವಲ್ಲ—ಅದರ ಹಾದಿ; ಸಂಯಮ ಶೀಲತೆ. ಅವರ ಪಾಲಿಗೆ ಅದೊಂದು ಧ್ಯೇಯ. ಉಳಿದೆಲ್ಲ ಧ್ಯೇಯಗಳಿಗೆ ತಳಹದಿ ಎಂದರೂ ಸರಿ. ಅದೊಂದು ಸಾಧಕ ಜೀವನದ ವಿಶಿಷ್ಟಮಾರ್ಗ.

ವಿನೋಬಾ ಅಂದರೆ ಗಾಂಧೀಜಿಗೆ ಬಹು ಅಕ್ಕರೆ. ಬಹು ಗೌರವ. ಗಾಂಧೀವಾದಿಗಳಲ್ಲಿ ವಿನೋಬಾ ಅಣಿಮುತ್ತು. ಮೊದಲಿನಿಂದಲೂ ರಾಜಕೀಯ ರಂಗವನ್ನು ಬಿಟ್ಟು ಆಧ್ಯಾತ್ಮ ಲೋಕದಲ್ಲೇ ಓಡಾಡುತ್ತಾರೆ. ಗಾಂಧೀ ಶಿಷ್ಯರಲ್ಲಿ ತಮ್ಮದೇ ಆದ ಒಂದು ವರ್ಚಸ್ಸನ್ನು ಸಂಪಾದಿಸಿಕೊಂಡಿದ್ದಾರೆ. ಮಹಾರಾಷ್ಟ್ರದ ಅನೇಕ ತರುಣರಿಗೆ ಅಂತರಂಗದ ಗೆಳೆಯ, ಗುರು ಆಗಿದ್ದಾರೆ.

ನಾನು ವರ್ಧಾದಲ್ಲಿದ್ದಾಗ ವೇದಾಂತ ಶಾಸ್ತ್ರ ಪಾರಂಗತರಾದ ಶ್ರೀ ರಾಧಾಕೃಷ್ಣನ್ ಗಾಂಧೀಜಿಯನ್ನು ನೋಡಲು ಸೇವಾಗ್ರಾಮಕ್ಕೆ ಬಂದಿದ್ದರು. ಇಂಗ್ಲೆಂಡಿನಲ್ಲಿ ತಮ್ಮ ಅಧ್ಯಾಪಕ ಪದವಿಯನ್ನು ಸ್ವೀಕರಿಸಲು ಹೊರಟಿದ್ದರು. ಹಾದಿಯಲ್ಲಿ ಹಿಂದುಸ್ಥಾನದ ಹಿರಿಮೆಯ ಮೂರುತಿಯನ್ನು ದರ್ಶಿಸಿ ಹರಕೆ ಪಡೆವ ಆಸೆಯಾಯಿತು. ಬಂದಿದ್ದರು. ಆ ದಿನ ಮನಸ್ಸಿನಲ್ಲಿ ಇನ್ನೂ ನೆಲೆಗೊಂಡಿದೆ. ಅತ್ತ ಮಹಾತ್ಮ; ಇತ್ತ ಮಹಾಚಾರ್ಯ. ಒಬ್ಬರು ಜಗದ್ವಂದ್ಯ ಕರ್ಮಯೋಗಿ. ಇನ್ನೊಬ್ಬರು ಜಗಜ್ಜೇತ ಜ್ಞಾನಯೋಗಿ.

ಆ ಅವರ ಮುಹೂರ್ತದ ಕೊನೆಯಲ್ಲಿ ಆಚಾರ್ಯರು ಹೊರಡುತ್ತಿದ್ದಂತೆ 'ಇಲ್ಲೇ ಪೌನಾರಿನಲ್ಲಿದಾರೆ ವಿನೋಬಾ. ತಾವು ಅವಶ್ಯ ಹೋಗಿ ನೋಡಬೇಕು. ಬಹಳ ಆನಂದವಾದೀತು' ಎಂದರು ಗಾಂಧೀಜೀ.

ಗಾಂಧೀಜಿಗೆ ವಿನೋಬಾ ಅಂದರೆ ಅಷ್ಟು ಗೌರವ. ಅಷು ಅಭಿಮಾನ.

ಕಣ್ಣಿಗಿದ್ದ ಕನ್ನಡಕ ಇಳಿಸಿದರು. ನಂದಾದೀಪದಂತೆ ಸ್ಥಿರವಾಗಿದ್ದ ಕಣ್ಣು ಕಾಣಬಂದವು. ವಿನೋಬಾ ನೋಡಲು ಸುರೂಪಿಯೂ ಇಲ್ಲ— ಕುರೂಪಿಯೂ ಇಲ್ಲ. ಕಪ್ಪು ಬಣ್ಣ. ಹಗುರಾದ ಮೈಕಟ್ಟು. ತಪೋಜೀವನದ ನಿಷ್ಠುರ ಸಂಯಮಕ್ಕೊಳಗಾದ ಮೈ ಇದ್ದುದೂ ಕರಗಿಹೋಗಿದೆ. ಜೋಳದ ಕಡ್ಡಿಯ ಹಾಗಿದಾರೆ. ಗಡ್ಡವೂ ಬೆಳೆದಿತ್ತು. ಹಲ್ಲಿನ ಸಾಲ

ಸ್ವಲ್ಪ ಮುಂದೆ ಬಂದಿದೆ. ಸ್ವಭಾವ ಬಹಳ ಸಂಕೋಚದ್ದು, ತೆಂಗಿನಕಾಯಂತೆ. ಮೇಲಿನ ಚಿಪ್ಪನ್ನು ಒಡೆದರೆ ಕೆಳಗೆ ಪಾನಯೋಗ್ಯವಾದ ಎಳನೀರು. ಸ್ವಲ್ಪ ಅಲುಗಾಡಿಸಬೇಕು, ವಿನೋಬಾ ಹೊರಕ್ಕೆ ಬರುತ್ತಾರೆ. ಇಲ್ಲದಿದ್ದರೆ ಆತ್ಮಸ್ತಂಭನ ವಿದ್ಯೆ ಅವರದು. ಒಳಗೊಳಗೇ ಹುದುಗಿಕೊಂಡು ಬಿಡುತ್ತಾರೆ.

ಬ್ರಹ್ಮಚರ್ಯ ವ್ರತವು ಜೀವನದ ಆನಂದದಲ್ಲಿ ಅವರಿಗಿರುವ ಶ್ರದ್ಧೆ, ಆಸಕ್ತಿಗಳನ್ನು ಕಡಿಮೆಮಾಡಿಲ್ಲ. ಬ್ರಹ್ಮಚರ್ಯವೆಂದರೆ ಒಳಗಿನ ಬೆಂಕಿಗೆ ನೀರುಹಾಕಿ ಬೂದಿ ಮಾಡುವುದಲ್ಲ. ಅಂತರ್ಜ್ಯೋತಿಯನ್ನು ಅಖಂಡವಾಗಿ, ದೇದೀಪ್ಯಮಾನವಾಗಿ ಬೆಳಗಿಸುವುದು. ಅವರನ್ನು ನೋಡಿದರೆ ಇದು ತಿಳಿಯುತ್ತದೆ. ಇಂದ್ರಿಯಗಳನ್ನು ಸುಟ್ಟುಕೊಂಡು, ಹೆಳವರಾಗಿ ಜೀವನದ ಆನಂದವನ್ನು ಕಳೆದುಕೊಳ್ಳುವುದು ಸಂಯಮವಲ್ಲ. ದೇಹವು ಒಂದು ರಥ. ಇಂದ್ರಿಯಗಳು ಕುದುರೆಗಳು. ಅವನ್ನು ಪಳಗಿಸಿಕೊಳ್ಳಬೇಕು. ವಿವೇಕಕ್ಕೆ ವಿಧೇಯವಾಗಿರುವಂತೆ ಅವನ್ನು ತಿದ್ದಬೇಕು. ಹಾಗಿಲ್ಲದುದು ನಿಸ್ಸಾರವಾದ ಗೊಡ್ಡುತನ.

ವಿನೋಬಾ ಹಿರಿಯ ಪಂಡಿತರು. ಅವರ ಸಂಸ್ಕೃತ ಪಾಂಡಿತ್ಯ ಶಾಸ್ತ್ರಾಭ್ಯಾಸ ಪರಿಣತವಾದುದು. ಇಷ್ಟು ಗಹನವಾಗಿ ಅಭ್ಯಾಸಮಾಡಿದವರು ವಿರಳ. ವೇದ ಪುರಾಣಾದಿಗಳು ಅವರಿಗೆ ಕನ್ನಡಿಯಿದ್ದಂತೆ. ಪಾಂಡಿತ್ಯವೇನು ಅಲಭ್ಯವಲ್ಲ. ಕೆಲವರಿಗಾದರೂ ಅಗಾಧ ಪಾಂಡಿತ್ಯ ಬಂದೀತು. ಆದರೆ ಪಾಂಡಿತ್ಯವನ್ನು ಜೀರ್ಣಿಸಿಕೊಂಡು, ಜೀವನ ಪಥದಲ್ಲಿ ಅದನ್ನು ಊರೆಗೋಲಾಗಿ ಮಾಡಿಕೊಂಡವರು ಮಾತ್ರ ಬಹಳ ಇಲ್ಲ. ವಿನೋಬಾ ತಮ್ಮ ಪಾಂಡಿತ್ಯದಿಂದ ಬಾಳಿನಲ್ಲಿ ಹಾದಿ ಹುಡುಕುತ್ತಾರೆ. ಇದ್ದ ದಾರಿಗಳನ್ನು ಮುಚ್ಚಲು ಹೋಗುವುದಿಲ್ಲ. ಕೆಲವು ದಿನ ಅವರ ಸಹವಾಸದಲ್ಲಿ ಕಳೆಯುವುದೇ ಒಂದು ವಿದ್ಯಾಭ್ಯಾಸ. ಅವರ ಜೀವನವೇ ಒಂದು ಪಾಠ.

ವಿನೋಬಾ ಭಾವೆ ಗಾಂಧೀಜೀಯ ಕಣ್ಣಿಗೆ ಬೀಳುವ ಮೊದಲು ಪುಣೆಯಲ್ಲಿ ಓದುತ್ತಿದ್ದರೆಂದು ಕಾಣುತ್ತದೆ. ಕಾಲೇಜಿನಲ್ಲಿ. ಗಾಂಧೀಜಿಯ ಜೀವನ ಸೌರಭಕ್ಕೆ ಮನಸೋತು ಓಡಿ ಹೋದ ದುಂಬಿಗಳಲ್ಲಿ ಇವರೂ ಒಬ್ಬರು. ಕಾಲೇಜಿಗೆ ಶರಣು ಹೊಡೆದು ಸಾಬರ್ಮತಿಯ ಸತ್ಯಾಗ್ರಹಾಶ್ರಮ ಸೇರಿದರು.

ಮೊದಲೇ ಮುಮುಕ್ಷು ಜೀವಿ. ನಾಲ್ಕೈದು ವರ್ಷಗಳಲ್ಲಿಯೇ ಸ್ವತಂತ್ರ ವ್ಯಕ್ತಿತ್ವವನ್ನು ಗಳಿಸಿಕೊಂಡರು. ಇವರ ತಾಪಸ ಜೀವನ, ಸುಮುಖಪಾಂಡಿತ್ಯಗಳು ಗಾಂಧೀಜಿಯನ್ನು ಮೆಚ್ಚಿಸಿದವು. ಕೆಲವು ದಿನಗಳಲ್ಲೇ ಸೇಟ್ ಜಮುನಾಲಾಲರು ಸಾಬರ್ಮತಿಯ ಮಾದರಿಯ ಆಶ್ರಮವೊಂದನ್ನು ವರ್ಧಾದಲ್ಲಿ ಪ್ರಾರಂಭಿಸಲು ನಿಶ್ಚಯಿಸಿದರು. ಸ್ವತಂತ್ರ ಆಶ್ರಮದ ಜವಾಬದಾರಿಯನ್ನು ಯಾರು ಹೊರಬೇಕು? ಸುಲಭವಾಗಿ ಹರಿಯಲಿಲ್ಲ ಆ ಪ್ರಶ್ನೆ ಕೊನೆಗೆ ಗಾಂಧೀಜೀ ಅದನ್ನ ಬಿಡಿಸಿದರು. ವರ್ಧಾ ಆಶ್ರಮಕ್ಕೆ ವಿನೋಬಾರನ್ನು ಹಿರಿಯರನ್ನಾಗಿ ಮಾಡಿ ಕಳಿಸಿಕೊಟ್ಟರು. ಅಂದಿನಿಂದ ಇಂದಿನವರೆಗೂ ವಿನೋಬಾ ಇಲ್ಲೇ ಇದ್ದಾರೆ. ಗಾಂಧೀಜೀ ಸೇವಾಗ್ರಾಮ ಸೇರಿದ ಮೇಲೆ ನಾಲವಾಡಿಯ ಆಶ್ರಮದ ಮಹತ್ವ ಸ್ವಲ್ಪ ಕುಗ್ಗಿದೆ ನಾಲವಾಡಿಯಲ್ಲಿ ಚರ್ಮದ ಉದ್ಯೋಗ ಈಚೆಗೆ ಹೆಚ್ಚಾಗಿದೆ. ಅದಕ್ಕೆ ಮೊದಲು ವಿನೋಬಾರ ನಾಲವಾಡಿಯ ಆಶ್ರಮ ಮಧ್ಯ ಪ್ರಾಂತದ ತರುಣರ ಸಾಧನಾಕ್ಷೇತ್ರವಾಗಿತ್ತು. ಅನೇಕರು ಬಂದು ಅವರ ಸುತ್ತಲೂ ಸೇರಿದರು.

ವಿನೋಬಾ ಬರೀ ಅಧ್ಯಾತ್ಮ ಲೋಕದ ಮುರುಳಲ್ಲ. ಅವರ ಆಶ್ರಮ ಜೀವನದಲ್ಲಿ ಹತ್ತಿ ಹಿಂಜುವುದು, ನೂಲುವುದು, ನೇಯುವುದು, ಬೇಸಾಯಗಳು ಮುಖ್ಯವಾದ ಶಿಕ್ಷಣ. ಗಾಂಧೀಜಿಯ ವಿದ್ಯಾವಿಧಾನದ ಪ್ರಯೋಗ ಇಲ್ಲಿ ದೀರ್ಘಕಾಲ ನಡೆಯಿತು. ಇಂಥ ಅನೇಕ ಪ್ರಯೋಗಗಳ ಫಲ ಇಂದಿನ ವರ್ಧಾ ವಿಧಾನ. ಆಶ್ರಮವಾಸಿಗಳು ತಮ್ಮ ಅಡಿಗೆಯನ್ನು ತಾವೇ ಮಾಡಿಕೊಳ್ಳುತ್ತಿದ್ದರು. ಆಹಾರ ಅತಿ ಸಾದಾ, ಸಾತ್ವಿಕ. ತಾವು ನೂತು ನೇದ ಬಟ್ಟೆಯಿಂದಲೇ ತಮ್ಮ ಉಡುಗೆ. ಆಶ್ರಮದಲ್ಲಿ ಅಪರಿಗ್ರಹ ತತ್ವವನ್ನು ವಿನೋಬಾ ಕಡ್ಡಾಯವಾಗಿ ಕಲಿಸಿಬಿಡುತ್ತಿದ್ದರು. ದಿನವೂ ತಾಸೆರಡು ತಾಸು ಆಶ್ರಮವಾಸಿಗಳಿಗೆ ವಿನೋಬಾ ತಮ್ಮ ಅನುಭವ ಗ್ರಂಥದಿಂದ ಅನೇಕ ವಿಷಯಗಳನ್ನು ಉಪದೇಶ ಮಾಡುತ್ತಿದ್ದರು.

ನಾಗಪುರದಲ್ಲಿ ಧ್ವಜ ಸತ್ಯಾಗ್ರಹ ನಡೆದಾಗ ವರ್ಧಾ ಆಶ್ರಮವೇ ಆ ಚಳುವಳಿಯ ಸ್ಫೂರ್ತಿ ಕೇಂದ್ರವಾಗಿತ್ತು. ಅದರ ಫಲವಾಗಿ ವಿನೋಬಾ ಸೆರೆಮನೆಯನ್ನು ನೋಡಿದರು.



# ಗಾಂಧೀಸೇವಾ ಸಂಘ

೧೯೨೨–೨೩ ರಲ್ಲಿ ಕಾಂಗ್ರೆಸ್ಸಿನಲ್ಲಿ ದೊಡ್ಡ ಒಡಕುಂಟಾಯಿತು. ಸ್ವರಾಜ್ಯ ಪಕ್ಷ–ಖಾದೀಪಕ್ಷ ಎಂದು ಕಾಂಗ್ರೆಸ್ಸು ಇಬ್ಭಾಗವಾಯಿತು. ಸ್ವರಾಜ್ಯಪಕ್ಷಕ್ಕೆ ಮೋತಿಲಾಲ ನೆಹರು, ಚಿತ್ತರಂಜನದಾಸರು ನಾಯಕರಾಗಿ ನಿಂತರು. ಖಾದೀಪಕ್ಷದ ಹೊಣೆಗಾರಿಕೆ ಚಕ್ರವರ್ತಿ ರಾಜಗೋಪಾಲಾ ಚಾರ್ಯರ ಮೇಲೆ ಇತ್ತು. ಈ ಸಂಘರ್ಷಣದಿಂದಲೂ ಗಾಂಧೀಜೀ ಆಗ ಸೆರೆ ಮನೆಯಲ್ಲಿದ್ದುದರಿಂದಲೂ ಕಾಂಗ್ರೆಸ್ಸಿನ ರಚನಾತ್ಮಕ ಕಾರ್ಯವೆಲ್ಲ ಕೆಲಸಪಟ್ಟಿಗೆ ಮೂಲೆಗೆ ಬಿದ್ದಂತಾಯಿತು. ಇದು ಸೇಠ ಜಮುನಾಲಾಲರಿಗೆ ಸರಿಕಾಣ ಲಿಲ್ಲ. ಒಂದು ಸಂಸ್ಥೆಯನ್ನು ರಚಿಸಿ ಖಾದೀ ಮುಂತಾದ ಕೆಲಸಕ್ಕೆ ಸ್ಥಾಯೀ ರೂಪವನ್ನು ಕೊಡುವ ವಿಚಾರವನ್ನು ಅವರು ನಾಯಕರೊಡನೆ ಚರ್ಚಿಸಿ ದರು. ರಾಜಗೋಪಾಲಾಚಾರ್ಯರೂ ದೇಶಪಾಂಡೆ ಗಂಗಾಧರರಾಯರೂ ರಾಜೇಂದ್ರ ಪ್ರಸಾದರೂ ಆದಕ್ಕೆ ಬೆಂಬಲವಿತ್ತರು. ಅದರ ಪರಿಣಾಮವೇ ಗಾಂಧೀಸೇವಾ ಸಂಘ.

ಗಾಂಧೀಸೇವಾ ಸಂಘದ ಹೆಸರೇ ಅದರ ಗೊತ್ತು ಗುರಿಗಳ ಸ್ಪಷ್ಟ ವ್ಯಾಖ್ಯಾನವಾಗಿದೆ. ಅಹಿಂಸೆ ಸತ್ಯಗಳನ್ನವಲಂಬಿಸಿ ಗಾಂಧೀಜಿಯ ರಚನಾ ತ್ಮಕ ಕಾರ್ಯಗಳನ್ನು ಸಾಗಿಸುವುದು ಸಂಘದ ಕರ್ತವ್ಯ. ಮೊದಲು ಮೊದಲು ಕಾಂಗ್ರೆಸ್ ನಾಯಕರಿಗೆ ಈ ಸಪ್ಪನೆ ತೊವ್ವೆ ಸರಿಬರಲಿಲ್ಲ. ಜನರಿಗೆ ಉಪ್ಪು ಕಾರ ಬೇಕು. ಸ್ವಲ್ಪವೂ ಬಡಾಯಿಗೆ ಅವಕಾಶವಿಲ್ಲದ ಮುಂದಾಳ್ತನ, ಕೊಂಚ ಕಠಿಣ. ವರ್ಕಿಂಗ್ ಕಮಿಟಿಯಲ್ಲಿ ಕೇವಲ ಮೂರೇ ಜನ ಸಂಘದ ಸದಸ್ಯರಾಗಿದ್ದರು. ೧೯೩೪ರ ವರೆಗೆ ಸಂಘಕ್ಕೆ ಒಂದು ಸರಿಯಾದ ರೂಪು ಬರಲಿಲ್ಲ. ಅನೇಕ ವಿಘ್ನಗಳು ಬಂದವು. ಕೊನೆಗೆ ೧೯೩೬ರಲ್ಲಿ ಗಾಂಧೀ ಸೇವಾ ಸಂಘದ ಮೊದಲನೆ ಸಮ್ಮೇಳನ ಮಧ್ಯಪ್ರಾಂತದ ಸಾವಲಿಯಲ್ಲಿ ನಡೆ ದಾಗ ಅದಕ್ಕೊಂದು ರೂಪು ಬಂತು. ಅಲ್ಲಿಂದೀಚೆಗೆ ಪ್ರತಿವರ್ಷವೂ ಸಮ್ಮೇ ಳನ ನಡೆದಿದೆ.

ಗಾಂಧೀಸೇವಾಸಂಘವಲ್ಲಿ ಸದಸ್ಯತ್ವದ ವರ್ಗಣಿಯಿಲ್ಲ. ಅಧಿಕಾರವೂ ಇಲ್ಲ. ಕಾಂಗ್ರೆಸ್ಸಿನ ಅಥವಾ ಇತರ ಸಂಸ್ಥೆಗಳಂತೆ ಯಾವ ಚುನಾವಣೆಗಳ ಗೊಂದಲಕ್ಕೂ ಹೋಗುವುದಿಲ್ಲ. ಶಾಸನಸಭೆಗಳು ಬೇಡ, ಅಖಿಲಭಾರತ ಕಾಂಗ್ರೆಸ್ಸಿನ ಸಮಿತಿಗೆ ಕೂಡ ತನ್ನ ಪ್ರತಿನಿಧಿಗಳನ್ನು ಕಳಿಸುವ ಗೋಜೇ ಇಲ್ಲ. ಸದಸ್ಯರಲ್ಲಿ ಅನೇಕರು ಹೆಸರಾದ ರಾಜಕೀಯ ನಾಯಕರು. ಆದರೆ ಸಂಘವು ರಾಜಕೀಯ ರಂಗನ್ನು ಬೇಡವೆಂದು ದೂರಮಾಡಿದೆ. ಸಂಘದ ಸದಸ್ಯರು ಗ್ರಾಮ ಸೇವಕರು. ಅಳಿದುಹೋಗುತ್ತಿರುವ ಹಿಂದುಸ್ಥಾನದ ಹಳ್ಳಿಗಳಲ್ಲಿ ಜೀವ ತುಂಬಿ ಹೊಸ ಬಾಳನ್ನು ಬಿತ್ತುವುದೇ ಅವರ ಗುರಿ. ಖಾದೀ, ಹರಿಜನಸೇವೆ, ಶಿಕ್ಷಣ, ಗ್ರಾಮೋದ್ಯೋಗ ಮೊದಲಾದವು ಅವರ ಹಾದಿ.

ಸಂಘವನ್ನು ರಾಜಕೀಯ ಸಂಸ್ಥೆಯನಾಗಿ ಮಾಡಬೇಕೇ ಬಿಡಬೇಕೇ ಎಂಬ ವಿಚಾರ ಬಾರದೆ ಹೋಗಿಲ್ಲ. ೧೯೩೭ರಲ್ಲಿ ಕರ್ನಾಟಕದಲ್ಲಿ—ಹುದಲಿಯಲ್ಲಿ—ಎರಡನೆ ಸಮ್ಮೇಳನ ನಡೆಯಿತು. ಆಗ ಈ ಮಾತು ದೀರ್ಘವಾಗಿ ಚರ್ಚೆಯಾಯಿತು. ಸಂಘಕ್ಕೆ ರಾಜಕೀಯ ಬಣ್ಣ ಕೊಡಕೂಡದೆಂದು ಅಲ್ಲಿ ನಿಶ್ಚಯವಾಯಿತು. ಅಷ್ಟೇ ಅಲ್ಲ, ಶಾಸನಸಭೆಗಳಲ್ಲಿರುವವರು, ಮಂತ್ರಿಗಳಾದವರು, ಸದಸ್ಯರಾಗಿರಬಾರದೆಂಬ ನಿರ್ಧಾರಕ್ಕೆ ಬಂದರು. ಆಗ ರಾಜಗೋಪಾಲಾಚಾರ್ಯರೇ ಮೊದಲಾದ ಅನೇಕರು ಸಂಘವನ್ನು ಬಿಟ್ಟರು.

ಸಂಘಕ್ಕೆ ರಾಜಕೀಯ ರಂಗು ಏಕೆ, ಮತ ಪಂಥಗಳ ಬಣ್ಣವೂ ಇಲ್ಲ. ಎಲ್ಲ ಜಾತಿಗಳಿಗೂ ಅದರಲ್ಲಿ ಎಡೆ ಇದೆ. ನಾಸ್ತಿಕರಿಗೆ ಮಾತ್ರ ಇಲ್ಲವೆಂದು ತಿಳಿದಿದ್ದೇನೆ. ಸಂಘದ ನಿಯಮಗಳೂ ನಿಷ್ಠುರವಾಗಿಲ್ಲ. ಸದಸ್ಯರೆಲ್ಲ ಸಾಧಕರು ; ತಮ್ಮ ತಮ್ಮ ಬಾಳಿನಲ್ಲಿ ಶುದ್ಧಿ ಸಿದ್ಧಿಗಳನ್ನು ಪಡೆಯಲು ಹೆಣಗುವವರು ಎಂಬುದೇ ಭಾವನೆ. ಗಾಂಧೀಜಿಯ ಆಶ್ರಮದಲ್ಲಿದ್ದಂತೆ ಸಂಜೆ ಮುಂಜಾನೆ ಇವರಿಗೂ ಪ್ರಾರ್ಥನೆಯ ವಿಧಿಯುಂಟು. ಆ ಪ್ರಾರ್ಥನೆಯ ಸಮಯದಲ್ಲಿ ಹನ್ನೊಂದು ವ್ರತಗಳ ಸಂಕಲ್ಪವೊಂದನ್ನು ಹೇಳಬೇಕು. ದಿನ ದಿನವೂ ಆ ಸಂಕಲ್ಪಕ್ಕೆ ತಕ್ಕಂತೆ ಬಾಳನ್ನು ನಡೆಯಿಸಬೇಕು. ಆ ವ್ರತಗಳ ಪರಿಣಾಮ ಬಾಳಿನಲ್ಲಿ ಹೆಚ್ಚು ಹೆಚ್ಚಾಗಿ ಮೂಡುತ್ತ ಬರಬೇಕು ಎಂಬುದೇ ಈ ನಿತ್ಯಪಾರಾಯಣದ ಉದ್ದೇಶ.

ಅಹಿಂಸೆ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ಅಸಂಗ್ರಹ, ಶರೀರಶ್ರಮ (ಕಾಯಕ), ಅಸ್ವಾದ, ನಿರ್ಭಯ. ಸರ್ವಧರ್ಮ ಸಮಾನತೆ, ಸ್ವದೇಶೀ, ಅಸ್ಪೃಶ್ಯತಾ ವಿಸರ್ಜನ, ಇವೇ ಆ ಹನ್ನೊಂದು ವ್ರತಗಳು.

ಪುಣೆಯ ಭಾರತ ಸೇವಕ ಸಂಘವಲ್ಲಿದ್ದಂತೆ ಇದರ ಸದಸ್ಯತ್ವಕ್ಕೆ ಬಿ. ಎ. ಆಗಬೇಕೆಂಬ ವಿಧಿಯಿಲ್ಲ. ಓದು ಬರಹ ಬಾರದಿದ್ದವರೂ ಸದಸ್ಯರಾಗಲು ಅಡ್ಡಿಯಿಲ್ಲ. ನಿರಕ್ಷರಸ್ಥರು ಯಾರೂ ಸದಸ್ಯರಾಗಿರದಿದ್ದರೂ ಅನೇಕ ಜನ ಸದಸ್ಯರಿಗೆ ಉಚ್ಚ ಶಿಕ್ಷಣದ ಮುದ್ರೆಯಿಲ್ಲ. ಉನ್ನತ ಶಿಕ್ಷಣ ಹೊಂದಿದವರೂ ಹಲವರಿದಾರೆ. ಡಾ. ರಾಜೇಂದ್ರ ಪ್ರಸಾದರೇ ಅದಕ್ಕೆ ಉದಾಹರಣೆ. ರಾಷ್ಟ್ರಪತಿಗಳಾಗಿ ಹೋದಂಥ ಮುಂದಾಳುಗಳು ಅದರಲ್ಲಿ ದಾರೆ. ಆದರೆ ಸಂಘದ ಅಧ್ಯಕ್ಷರಾದ ಕಿಶೋರಲಾಲ ಮಶ್ರೂವಾಲಾ ಕಾಂಗ್ರೆಸ್ಸಿನಲ್ಲಿ ಕೇವಲ ನಾಲ್ಕಾಣೆಯ ಸದಸ್ಯರು. ಇಷ್ಟು ಮಹತ್ವ ಪೂರ್ಣ ಸಂಸ್ಥೆಯಾದರೂ ಇದಕ್ಕೊಂದು ಸರಿಯಾದ ಕಾರ್ಯಾಲಯವಿಲ್ಲ. ಸದಸ್ಯರಿಗೆ ನಿವಾಸ (Quarters)ಗಳಿಲ್ಲ. ಸದಸ್ಯರೆಲ್ಲ ಒಂದೆಡೆ ಇರುವುದೂ ಇಲ್ಲ. ದೇಶದ ಬೇರೆ ಬೇರೆ ಪ್ರಾಂತಗಳಲ್ಲಿ ಚದರಿ ಹೋಗಿದ್ದಾರೆ. ಆದರೆ ೧೯೩೬ರಿಂದ ಎಲ್ಲರೂ ವರ್ಷಕ್ಕೊಮ್ಮೆ ಒಂದೆಡೆ ಸೇರುವ ಸಂಪ್ರದಾಯವೊಂದು ಮೊದಲಾಗಿದೆ. ಅದೇ ಗಾಂಧೀಸೇವಾಸಂಘ ಸಮ್ಮೇಳನ. ಈ ವರ್ಷ ಬೃಂದಾವನ (ಬಿಹಾರ)ದಲ್ಲಿ ನಡೆಯಿತು.

ಸಮ್ಮೇಳನವು ಒಂದು ಬಗೆಯ ಆಧ್ಯಾತ್ಮಿಕ ಚಿಲುಮೆಯಿದ್ದಂತೆ. ಎಲ್ಲರೂ ತಮತಮಗೆ ಅಳವಾದಷ್ಟು ತುಂಬಿಕೊಂಡು ಹೋಗುತ್ತಾರೆ. ಸಾಧಕರಂತೆ ತಮ್ಮ ತಮ್ಮ ಅನುಭವಗಳನ್ನು ತೋಡಿ ಒಬ್ಬರಿಗೊಬ್ಬರು ನೆರವಾಗುತ್ತಾರೆ. ತಮ್ಮ ಸಂಕಲ್ಪವನ್ನು ಜೀವನದಲ್ಲಿ ಮೂಡಿಸುವ ಪ್ರಯತ್ನದಲ್ಲಿ ಒದಗುವ ಎಡರುಗಳನ್ನು ಚರ್ಚಿಸಿ ನಿವಾರಣೋಪಾಯಗಳನ್ನು ಹುಡುಕುತ್ತಾರೆ. ಅದಕ್ಕಾಗಿ ಕೆಲವು ಠರಾವುಗಳನ್ನೂ ಮಾಡಿ ಕೊಳ್ಳುತ್ತಾರೆ. ಸದಸ್ಯರೆಲ್ಲ ತಮ್ಮ ದಿನಚರಿಯನ್ನು ಬರೆದಿಡಬೇಕೆಂಬ ನಿಯಮ ಸಂಘದಲ್ಲಿದೆ.

ಗಾಂಧೀಜೀ ಈ ಸಮ್ಮೇಳನದಲ್ಲಿ ಭಾಗ ವಹಿಸುತ್ತಾರೆ. ಸದಸ್ಯರ ಸಮಸ್ಯೆ—ಸಂದೇಹಗಳನ್ನು ಬಗೆಹರಿಸುತ್ತಾರೆ. ಪ್ರಶ್ನೋತ್ತರಗಳ ಕಾರ್ಯಕ್ರಮ ಹೀಗೆ ಸಮ್ಮೇಳನದ ಮುಖ್ಯಾಂಗವಾಗಿದೆ. ಖಾದೀ ಪ್ರದರ್ಶನ,

ಗ್ರಾಮೋದ್ಯೋಗ ಪ್ರಚಾರ ಮುಂತಾದವೂ ನಡೆಯುತ್ತವೆ. ಸದಸ್ಯರು ದಿನವೂ ಶರೀರಶ್ರಮದಲ್ಲಿ ೨-೩ ಗಂಟೆ ಕಳೆಯುತ್ತಾರೆ. ಅಖಿಲ ಭಾರತದ ನಾಯಕರು ಹಳ್ಳಿಯ ಜನರಿವರು ಇಡುವ ಈ ಉದಾಹರಣೆ ನಿಜವಾಗಿ ಅಮೂಲ್ಯವಾದುದು.

ಸಂಘದ ಸದಸ್ಯರ ಜೀವನದಲ್ಲಿ ಸರಳತೆ ಒಡೆದು ಕಾಣುತ್ತದೆ. ಜೀವನಕ್ಕೆ ಬೇಕಾದಷ್ಟು ಮಾತ್ರವೇ ಗಳಿಸಿ, ಉಳಿದ ಕಾಲವನ್ನು ದೇಶ ಸೇವೆಗಾಗಿ ವಿನಿಯೋಗಿಸುವವರನೇಕರಿದ್ದಾರೆ. ೮ ರೂಪಾಯಿನಲ್ಲಿ ಕೆಲವರು, ೧೫ ರಲ್ಲಿ ಕೆಲವರು ತೃಪ್ತರಾದದ್ದುಂಟು. ಸಂಘದಿಂದ ಕೆಲವರಿಗೆ ‘ಜೀವನ ವೇತನ’—ಉಂಡು ಉಟ್ಟಿರಲು ಬೇಕಾದಷ್ಟು ಮಾತ್ರ, ದೊರೆಯುತ್ತದೆ. ಕೆಲವರು ಬೇರೆ ಬೇರೆ ಸಂಸ್ಥೆಗಳಿಂದ ತಮ್ಮ ಹೊಟ್ಟೆಗೆ ಗಳಿಸುತ್ತಾರೆ. ಹಣವಂತ ಮನೆತನದವರಾದರೆ ಯಾವ ಗಳಿಕೆಗೂ ಅವಕಾಶವಿಲ್ಲ. ಅವರ ದುಡಿತ ಪ್ರೇಮದ ಸೇವೆ. ಸದಸ್ಯರಲ್ಲಿ ಮೂರು ವಿಧ. ಸೇವಕ, ಸಹಯೋಗಿ, ಸಹಾಯಕ. ಕ್ರಮವಾಗಿ ಈ ಮೂರೂ ತೆರಗಳಲ್ಲಿ ವಿಧಿ ನಿಯಮಗಳು ಕಡಿಮೆಯಾಗುತ್ತವೆ. ಸೇವಕ ಸದಸ್ಯರಿಗೆ ನೈತಿಕ, ಸಾಮಾಜಿಕ ನಿಯಮಗಳು ಹೆಚ್ಚಾಗಿವೆ. ಸಂಘದ ಹನ್ನೊಂದು ವ್ರತಗಳನ್ನು ಬಾಳಿನಲ್ಲಿ ಹೆಣೆಯುವ ಬಿಗಿಯಾದ ಕಟ್ಟಳೆಗಳಿವೆ. ಗಾಂಧೀ ಸೇವಾ ಸಂಘದ ಸೇವಕನಾಗುವುದು ನಿಜವಾಗಿ ಧೈರ್ಯದ ಮಾತೇ ಸರಿ.

ಸಂಘದ ಮುಖ್ಯ ಕಾರ್ಯಾಲಯ ವರ್ಧಾದಲ್ಲೇ. ಕಾರ್ಯದರ್ಶಿ, ಅಧ್ಯಕ್ಷರಿಬ್ಬರೂ ಇಲ್ಲೇ ಇರುತ್ತಾರೆ. ಕಿಶೋರಿಲಾಲ ಮಶ್ರೂವಾಲಾ ಸಂಘದ ಅಧ್ಯಕ್ಷರೆಂದು ಹೇಳಿದೆ. ಇವರು ಗುಜರಾತಿ ಜನರಾದರೂ ಮಹಾರಾಷ್ಟ್ರದಲ್ಲಿ ಹುಟ್ಟಿ ಬೆಳೆದವರು. ಬಿರಾರ ಪ್ರಾಂತದ ಅಕೋಲಾದವರು. ಅಲ್ಲಿ ವಕೀಲರಾಗಿದ್ದರು. ಗಾಂಧೀಜಿಯ ಕಹಳೆಯ ಧ್ವನಿಗೆ ಓಗೊಟ್ಟು ವಕೀಲಿಯನ್ನು ಬಿಟ್ಟು ಸಾಬರ್ಮತಿಯ ಕಡೆಗೆ ಓಡಿದರು. ಅಲ್ಲಿಂದ ಮುಂದೆ ಇವರಿಬ್ಬರ ನಿಕಟ ಸಂಬಂಧ ಬೆಳೆಯಿತು.

ಕಿಶೋರಲಾಲರಿಗೆ ಶಿಕ್ಷಣ, ತತ್ವಶಾಸ್ತ್ರಗಳಲ್ಲಿ ರುಚಿ ಹೆಚ್ಚು. ಯಾವ ವಿಷಯವನ್ನೇ ಆಗಲಿ ಸೂಕ್ಷ್ಮವಾಗಿ ಪರಿಶೀಲಿಸಿ, ಆಳವಾಗಿ ವಿಂಗಡಿಸಿ ನೋಡುತ್ತಾರೆ. ತರ್ಕದ ಹಿಡಿತ ಚೆನ್ನಾಗಿದೆ. ಜೀವನದಲ್ಲಿ ಸಂಭವಿಸುವ

ಕೃತಿಗಳನ್ನು ತತ್ವದ ಒರೆಗೆ ಹಚ್ಚಿ ನೋಡುವುದರಲ್ಲಿ ನಿಪುಣರು. ಪ್ರವೃತ್ತಿ ಆಧ್ಯಾತ್ಮಿಕ, ಸ್ವಭಾವ ಸೂಕ್ಷ್ಮ, ಮಾತಿನಲ್ಲಿ ಸ್ಪಷ್ಟಭಾಷೆ. ಇವರು ವಿಚಾರ ಮಾಡುವ ಹಾದಿ ತೀರಾ ಸ್ವತಂತ್ರವಾದುದು. ಹೀಗಾಗಿ ಅನೇಕ ಸಲ ಇವರ ವಿಮರ್ಶೆ ಟೀಕೆ ಬಹಳ ಕಟುವಾಗಿ ಕಾಣಬರುತ್ತದೆ. ಗಾಂಧೀಜಿಯ ಸಿದ್ಧಾಂತಗಳನ್ನು ಪೂರ್ಣವಾಗಿ ಗ್ರಹಿಸಿದವರು ಹಿಂದುಸ್ಥಾನದಲ್ಲಿ ಬಹಳೇ ಸ್ವಲ್ಪ ಜನ. ಕಿಶೋರಲಾಲರು ಅವರಲ್ಲಿ ಮುಖ್ಯರಾದ ಒಬ್ಬರು. ಅಂತೇ ೧೯೩೪ ರಲ್ಲಿ ಗಾಂಧೀಸೇವಾ ಸಂಘವು ಈಗಿನ ರೂಪಕ್ಕೆ ಬಂದಾಗ ಗಾಂಧೀಜೀ ಇವರನ್ನು ಅದಕ್ಕೆ ಅಧ್ಯಕ್ಷರಾಗಿರಲು ಆರಿಸಿದರು. ಅಂದಿನಿಂದ ಕಿಶೋರ ಲಾಲರು ವರ್ಧಾದಲ್ಲೇ ಇದ್ದಾರೆ.

ಕಾಂಗ್ರೆಸ್ಸಿನ ವ್ಯವಹಾರದಲ್ಲಿ ಇವರು ಹೆಚ್ಚು ಪ್ರವೇಶಿಸುವುದಿಲ್ಲ. ಆದರೂ ಬೊಂಬಾಯಿ ಕಾಂಗ್ರೆಸ್ಸಿನಲ್ಲಿ ಕಾಂಗ್ರೆಸ್ಸಿನ ರಚನೆ, ಘಟನೆಗಳಲ್ಲಿ ಮಾಡಲ್ಪಟ್ಟ ದೂರವ್ಯಾಪಿಯಾದ ಬದಲಾವಣೆಗಳಿಗೆ ಇವರು ಕಾರಣರು. ಗಾಂಧೀಜಿಯೊಡನೆ ಅನೇಕ ಸಲ ಧೈರ್ಯವಾಗಿ ಸ್ಪಷ್ಟವಾಗಿ ವಾದಿಸಿ ತಮ್ಮ ಭಿನ್ನಾಭಿಪ್ರಾಯವನ್ನು ತೋರಿಸಿದಾರೆ. ಇವರಿಬ್ಬರಲ್ಲಿ ತಾತ್ವಿಕ ಮತಭೇದವಾದಾಗ ಕಿಶೋರಲಾಲರಿಗೇ ಜಯವಾಗುವುದು ಹೆಚ್ಚು ಸಲ. ಇವರದು ಸಿದ್ಧಾಂತವ ಅಸಿಧಾರೆ. ಗಾಂಧೀಜಿಯದು ವ್ಯವಹಾರದ ಸಮನ್ವಯ. ವ್ಯವಹಾರಕ್ಕಾಗಿ ಆದರ್ಶವನ್ನು ಮುಸುಕು ಮಾಡಿದರೆ ಬೆರಳು ಕೊಟ್ಟು ಕೈ ನುಂಗಿಸಿಕೊಂಡಂತೆ ಎಂದು ಸಂಘದ ಅಧ್ಯಕ್ಷರ ದೃಷ್ಟಿ. ಸಂಘದ ಸದಸ್ಯರು ರಾಜಕೀಯ ಶಾಸನಸಭೆಗಳಲ್ಲಿರಬೇಕೋ ಬೇಡವೋ ಎಂಬ ಪ್ರಶ್ನೆ ಮೇಲೆ ಹೇಳಿದ ರೀತಿಯಲ್ಲಿ ತೀರ್ಮಾನವಾಗಲು ಕಿಶೋರ ಲಾಲರ ಆದರ್ಶವಾದಿತ್ವವೇ ಕಾರಣ.

ಕಿಶೋರಲಾಲರು ಗುಜರಾತಿಗೆ ಹೋದ ಮೇಲೆ ಗುಜರಾಥ ವಿದ್ಯಾಪೀಠದ ರೆಜಿಸ್ಟ್ರಾರರಾಗಿದ್ದರು. ಸತ್ಯಾಗ್ರಹದ ವೇಗದಲ್ಲಿ ಇವರೂ ಕಾರಾಗಾರ ಕಂಡಿದಾರೆ- ಒಂದು ಸಲ ಇವರೂ ಸರದಾರರೂ ಒಟ್ಟಿಗೆ ಸೆರೆಯಲ್ಲಿದ್ದರು. ಇವರ ಮೈ ಹುಟ್ಟು ದುರ್ಬಲವಾದುದು. ಇವರ ಮನೆತನದಲ್ಲೇ ಶ್ವಾಸರೋಗ ಹುಟ್ಟಿ ಬಂದಿದೆ. ಸೆರೆಮನೆಯಲ್ಲಿ ಆರೋಗ್ಯ ಮತ್ತೂ ಕೆಟ್ಟು ಹೋಯಿತು. ನೋಡಲು ಕಡ್ಡಿಯಂತೆ ಸೀರಲು, ಬರಗಾಲದ ಕಂಗಾಲ

ರಂತೆ ಕಾಣುತ್ತಾರೆ. ಆದರೆ, ಈ ನಿರ್ಬಲ ದೇಹದಲ್ಲಿ ಅಡಗಿರುವ ಜೀವ ಮಾತ್ರ ಅಜೇಯವಾದುದು, ಅದಮನೀಯವಾದುದು.

ಕಿಶೋರಲಾಲರ ಬಾಳಿನಲ್ಲಿ ಈ ಅಮರ ಜ್ಯೋತಿಯನ್ನು ಬೆಳಗಿಸಿದ ಹಣತೆಗಳು ಅವರ ಸತ್ಯಪ್ರೇಮ, ಬ್ರಹ್ಮಚರ್ಯ. ಸತ್ಯವಾಡುವುದು ಇವರಿಗೊಂದು ವ್ರತ ಎನ್ನುವುದಕ್ಕಿಂತ ಹಟ ಎನ್ನುವುದು ಸರಿ. ಇವರ ಜೊತೆಯಲ್ಲೇ ಅಸತ್ಯದ ಬಗ್ಗೆ ಅಸಹನೆಯೂ ಬೆಳೆದು ಬಂದಿದೆ. ಸುಳ್ಳು ಕಪಟಗಳು ಇವರಿಗೆ ಸೇರುವುದಿಲ್ಲ. ಇಲಿ, ಬೆಕ್ಕಿನ ನ್ಯಾಯ ಅದು. ಗಿರಾಕಿ ತಂದು ಕೊಟ್ಟ ನಾಣ್ಯಗಳಲ್ಲಿ ಒಂದೇ ಖೋಟಾ ನಾಣ್ಯವಿದ್ದರೂ ಆ ಹಣವನ್ನೆಲ್ಲಾ ತಳ್ಳಿ ಬಿಡುವ ಕೋಮಟಿಯಂತೆ ಇವರು. ೧೯೩೨ರ ಸತ್ಯಾಗ್ರಹದಲ್ಲಿ ವ್ಯೂಹರಚನೆ ಗುಪ್ತವಾಗಿತ್ತು. ಸರಕಾರಕ್ಕೆ ಸ್ವಲ್ಪವೂ ತಿಳಿಯಗೊಡದಂತೆ ಎಲ್ಲವೂ ಗುಟ್ಟಾಗಿ ನಡೆಸಲ್ಪಟ್ಟಿತು. ಮುಂದೆ ಗಾಂಧೀಜೀ ಈ ಗುಟ್ಟಿನ ಪದ್ಧತಿಯನ್ನು ಬಹಳ ನಿಂದಿಸಿದರು. ಸತ್ಯಾಗ್ರಹದಲ್ಲಿ ಇಂಥ ಗುಟ್ಟಿನ ವ್ಯವಹಾರವು ಪಾಪ ಎಂದರು. ಇದಕ್ಕೆಲ್ಲ ಕಿಶೋರಲಾಲರ ಸತ್ಯಪ್ರೇಮವು ಕಾರಣ.

ಇವರ ಬ್ರಹ್ಮಚರ್ಯ ಆದರ್ಶದ ಜಾತಿಯದು. ಇವರಿಗೆ ಮೊದಲೇ ಮದುವೆಯಾಗಿತ್ತು. ಸಾಬರ್ಮತಿಯ ಗಾಳಿ ಕುಡಿದ ಮೇಲೆ ಬ್ರಹ್ಮಚರ್ಯದಲ್ಲಿ ಇವರಿಗೆ ಶ್ರದ್ಧೆ ಉಂಟಾಯಿತು. ಅಂದಿನಿಂದ ಗಂಡ ಹೆಂಡರಿಬ್ಬರೂ ಬ್ರಹ್ಮಚಾರಿಗಳಾಗೇ ಇದ್ದಾರೆ. ಸುಳ್ಳು ಹೇಳದವರು, ಧರ್ಮವಾಗಿಯೇ ನಡೆಯುವವರು ಸಿಕ್ಕಾರು. ಆದರೆ ಇಂದ್ರಿಯ ಸಂಯಮದಲ್ಲಿ ತೇರ್ಗಡೆ ಹೊಂದುವವರು ಅತಿ ವಿರಳ.

ಕಿಶೋರಲಾಲರು ಆ ಹಾದಿಯಲ್ಲಿ ನಡೆದಿದ್ದಾರೆ.



# ಸಂಗಮ

ನಾಲವಾಡಿ ಈಗ ಖಾದೀ ಕೇಂದ್ರವಾಗಿ ಬಿಟ್ಟಿದೆ. ೪೦–೫೦ ಮಗ್ಗ ಗಳದೊಂದು ಕಾರಖಾನೆಯಾಗಿದೆ. ಅದಕ್ಕೆ ಬೇಕಾದ ಪರಿವಾರವೂ ಇದೆ. ನೂಲುವುದು, ಬಣ್ಣ ಹಾಕುವುದು, ಚರಖಾ ಮಾಡುವುದು ಮುಂತಾದ ಎಲ್ಲ ವಿಭಾಗಗಳೂ ಇವೆ. ಮಹಾರಾಷ್ಟ್ರ ಚರಖಾ ಸಂಘಕ್ಕೆ ಇದು ಮುಖ್ಯ ಕೇಂದ್ರ. ಅದರ ಕಾರ್ಯಾಲಯ ಇಲ್ಲೇ ಇದೆ.

ವರ್ಧಾಕ್ಕೆ 1-1½ ಮೈಲು ದೂರವಿರುವ ಈ ಹಳ್ಳಿಯಲ್ಲಿ ಹರಿಜನರೇ ಬಹಳ. ಇತರರು ಇಲ್ಲವೋ ಏನೋ! ಅವರಿಗಾಗಿಯೆ ಇಲ್ಲಿ ಸತ್ಯಾಗ್ರಹಾಶ್ರಮ ಆರಂಭವಾದದ್ದು. ವರ್ಧಾ ಆಶ್ರಮ ೧೯೨೧ ರಲ್ಲಿ ಮೊದಲಾದಾಗ, ಈಗ ಮಹಿಲಾಶ್ರಮ ಇರುವ ಕಟ್ಟಡಗಳಲ್ಲಿ ಮೊದಲಾಯಿತು. ಮುಂದೆ ನಾಲವಾಡಿಯಲ್ಲಿ ಏರ್ಪಾಟಾಯಿತು.

ವರ್ಧಾ ಆಶ್ರಮದ ಮೊದಲಿಗರು ಆಚಾರ್ಯ ವಿನೋಬಾ, ಮಗನ್ ಲಾಲ್ ಗಾಂಧೀ, ರಮಣಿಕಲಾಲ ಭಾಯಿ. ಈಗ ಆಶ್ರಮ ಚದರಿದಂತಾಗಿದೆ. ವಿನೋಬಾರ ಅನುಯಾಯಿಗಳು ಗ್ರಾಮಸೇವಾ ಮಂಡಲವೊಂದನ್ನು ಮಾಡಿಕೊಂಡಿದಾರೆ. ಅದರ ಸದಸ್ಯರಿಗೆ "ಜೀವನ ವೇತನ"–ಕೇವಲ ಹೊಟ್ಟೆ ಬಟ್ಟೆಗೆ ಸಾಲುವಷ್ಟು–ಕೊಡುತ್ತಾರೆ. ಹಳ್ಳಿಗಳಲ್ಲಿ ಪುನರುಜ್ಜೀವನದ ಸಂಸ್ಕೃತಿಯ ಪ್ರಚಾರ, ಉದ್ಯೋಗ ಪ್ರಿಯತೆ, ಖಾದೀ ಮೊದಲಾದುದರ ಪ್ರಸಾರ, ಇವರ ಕೆಲಸ. ಈ ಮಂಡಲಕ್ಕೆ ಸೇರಿದವರಿಗೆ ಹಿರಿಯರು ವರ್ಧಾದ ಪ್ರಸಿದ್ಧ ವಕೀಲರಾಗಿದ್ದ ಗೋಪಾಲರಾವ್ ಕಾಳೆ.

ಆಶ್ರಮದ ಪಕ್ಕದಲ್ಲಿ ಗೋಪುರಿ, ಜಮುನಾಲಾಲರು ಕಟ್ಟಿದ ಗೋರಕ್ಷಣೆಯ ಆಶ್ರಮ. ಗೋಸೇವಾ ಸಂಘದ ಚರ್ಮಾಲಯವಿದೆ. ಸತ್ತ ದನಗಳ ಚರ್ಮವನ್ನೂ ಕೂಡ ಕಸಾಯಿ ಮನೆಗಳ ತೊಗಲಿನಂತೆ ಹೊಳೆಯುವ ಹಾಗೆ ಹದ ಮಾಡಬಹುದು ಎಂಬ ಆಸೆಯ ಹಣ್ಣು ಈ ವಿಭಾಗ. ಯಂತ್ರದಿಂದ ತೊಗಲು ಹದಮಾಡುವ ಕಸಬು ಬಂದ ಮೇಲೆ ಹಿಂದು

ಸ್ಥಾನದ ಹಳ್ಳಿಗಳಲ್ಲಿ ವ್ಯವಸಾಯಕ್ಕೆ ಅಂಗವಾದ ಚರ್ಮದ ಕೈಗಾರಿಕೆ ಬಹಳ ಕ್ಷೀಣವಾಯಿತು. ಜನರು ಮಿದುವಾದ ಹೊಳಪಿನ ತೊಗಲಿಂದ ಮಾಡಿದ ವಸ್ತುಗಳನ್ನು ಕೊಳ್ಳಲು ಮೊದಲುಮಾಡಿದರು. ಪರದೇಶದಿಂದ ಚರ್ಮದ ಸಾಮಾನೂ, ರಬ್ಬರು ಸಾಮಾನೂ ಬರತೊಡಗಿದವು. ಹಿಂದು ಸ್ಥಾನದ ಹಳ್ಳಿಗಳ ಹರಿಜನರ ಕೈಯಿಂದ ಅವರ ಗುತ್ತಿಗೆಯೇ ಆಗಿದ್ದ ಈ ಉದ್ಯೋಗ ಜಾರತೊಡಗಿತು.

ಇಷ್ಟೇ ಅಲ್ಲದೆ ಕಸಾಯಿಖಾನೆಯ ತೊಗಲು ಮಿದುವಾಗಿದ್ದು, ಸತ್ತ ದನಗಳ ತೊಗಲು ಹದಮಾಡಲು ಕೊಂಚ ಉರುಟು. ಆದರೆ ಮೊದಲಿನ ದರದಲ್ಲಿ ಹಿಂಸೆ ತುಂಬಿದೆ. ಚರ್ಮಕ್ಕಾಗಿಯೆ ಪ್ರಾಣಿಗಳನ್ನು ಕೊಲ್ಲುವಷ್ಟು ದೂರ ಮುಟ್ಟಿದೆ ಈ ವ್ಯಾಪಾರ.

ಸಾಬರ್ಮತಿಯಲ್ಲೇ ಈ ಪ್ರಯೋಗ ಮೊದಲಾಯಿತು. ಗೋ ಸೇವಾ ಸಂಘಕ್ಕಾಗಿ ಗಾಂಧೀಜೀ ಆ ಕಾಲದಲ್ಲಿ ಬಹಳ ದುಡಿದ್ದಾರೆ. ಹಸುಗಳ ತಳಿಯನ್ನು ಉತ್ತಮಗೊಳಿಸುವದಕ್ಕೂ ಅಲ್ಲಿ ಬಹಳ ಪ್ರಯತ್ನ ಮಾಡಿದರು. ಎಮ್ಮೆ ಕೊಡುವಷ್ಟು ಹಾಲನ್ನು ಹಸು ಕೊಡುವಂತಾಗಬೇಕೆಂಬುದು ಅವರ ಉದ್ದೇಶ. ೧೯೨೪—೨೮ರ ನಡುವೆ "ಯಂಗ್ ಇಂಡಿಯಾ"ದಲ್ಲಿ ಗೋ ರಕ್ಷಣೆಯ ವಿಷಯವಾಗಿ ವಾಲ್ಜೀ ಗೋವಿಂದಜೀ ದೇಸಾಯಿ ಆಗಾಗ ಬರೆ ಯುತ್ತಿದ್ದರು. ಗಾಂಧೀಜೀ ಹೊರಗೆಳೆದ ಅನೇಕ ವ್ಯಕ್ತಿಗಳಲ್ಲಿ ಅವರೂ ಒಬ್ಬರು. ಎಲ್ಲಾ ಒಂದೇ ಜಾತಿ. ಈಗ ಅವರು ಅಷ್ಟಾಗಿ ಕಾರ್ಯರಂಗದಲಿಲ್ಲ. ಈಗ ಚರ್ಮಾಲಯದ ಹಿರಿಯರು ವಾಳೂಂಜಕರರು.

ಚರ್ಮಾಲಯದಲ್ಲಿ ತಿರುಗಾಡಿ ನೋಡಿದೆವು. ಸತ್ತ ದನಗಳನ್ನು ಕುಯ್ದು ಮಾಂಸ, ಎಲುಬುಗಳನ್ನು ಒಳ್ಳೆಯ ಗೊಬ್ಬರವನ್ನಾಗಿ ಮಾಡುವ ಮೊದಲಿನ ಮೆಟ್ಟಲಿನಿಂದ, ನಯವಾಗಿ ಮಿರುಗುವ ಚರ್ಮದ ಚಪ್ಪಲಿ, ಬೂಟುಗಳನ್ನು ಮಾಡುವವರೆಗೆ ಎಲ್ಲ ವಿಭಾಗಗಳಲ್ಲೂ ಕೆಲಸ ಜೋರಾಗಿ ನಡೆದಿತ್ತು. ತೊಗಲನ್ನು ಹದಮಾಡಲು ಮೂರು ನಾಲ್ಕು ರೀತಿಗಳಿವೆ. ಅದರಲ್ಲಿ (Bark tanning) ತೊಗಟೆ, ತೊಪ್ಪಲಿನಿಂದ ಹದಮಾಡುವ ರೀತಿ ಇಲ್ಲಿ ಬಹಳ ಸಫಲವಾಗಿದೆ ಮಧ್ಯಪ್ರಾಂತದಲ್ಲಿ ಇದಕ್ಕೆ ಬೇಕಾದ ಸಾಮಗ್ರಿ ಹೇರಳವಾಗಿ ಸಿಗುತ್ತದೆ. ಕ್ರೋಮ್ ಹದಕೊಡಲು ಬೈಕ್ರೊ

ಮೇಟ್ ಉಪಯೋಗಿಸುತ್ತಾರೆ. ಇದು ಮೈಸೂರು ದೇಶದಲ್ಲಿ ಹೆಚ್ಚಾಗಿ ಸಿಗುತ್ತದೆಯೆಂದು ಶಾಸ್ತ್ರಜ್ಞನರ ಅನುಭವ. ಬಹುಶಃ ಚರ್ಮದ ಕೈಗಾರಿಕೆಯನ್ನು ವಿಸ್ತಾರವಾಗಿ ಮೈಸೂರು ಕೈಗೊಂಡರೆ ಸಫಲವಾದಿತೋ ಏನೋ!

ಚರ್ಮಾಲಯದಲ್ಲಿ ಮಾಡುವ ಪೆಟ್ಟಿಗೆ, ಹಣದ ಚೀಲ, ಕಾಲ್ಮರಿಗಳನ್ನು ನೋಡಿದೆವು. ಪದಾರ್ಥ ಬಹು ನಯವಾಗಿ ತಯಾರಾಗುತ್ತದೆ. ಬಹು ಬೇಗನೆ ೭ ಆಣೆಗೆ ಜೊತೆ ಚಪ್ಪಲಿ, ೧೦ ಆಣೆಗೆ ಜೊತೆ ಜೋಡುಗಳನ್ನು ಕೊಡುಬಲ್ಲೆನೆಂಬ ಧೈರ್ಯ ತಮಗಿರುವದಾಗಿ ವಾಳೂಂಜಕರರು ಹೇಳಿದರು. ಹಿಂದುಸ್ಥಾನದ ಹಳ್ಳಿಗಳಲ್ಲಿ ಇಷ್ಟು ಅಗ್ಗವಾಗಿ, ಇಷ್ಟು ನಯವಾಗಿ ಈ ಪದಾರ್ಥಗಳು ತಯಾರಾಗುವುದಾದರೆ ಹಳ್ಳಿಗಳಲ್ಲಿ ಸುಖಸಮೃದ್ಧಿಯು ಹೇಗೆ ತಾಂಡವವಾಡೀತೋ!

ಆದರೆ ಈಗ ಬೀದಿಬೀದಿಗೂ ಬಾಟಾ ಕಂಪನಿಯ ಅಂಗಡಿಗಳು, ರಬ್ಬರು, ಕ್ಯಾನವಾಸ್ ಪದಾರ್ಥಗಳು ತುಂಬಿವೆ. ಇಡೀ ಜಗತ್ತಿಗಲ್ಲೇ ಸಾಟಿಯಿಲ್ಲದ ಬಡತನದ ಭೀಕರ ಪಾತಾಳದಲ್ಲಿ ಮುಳುಗಿರುವ ಹರಿಜನರ ಗುಡಿಸಲಿನ ಕೈಗಾರಿಕೆಗೂ ಈ ಪೋಟಿ. ಯಾರಿಗೂ ಉಳಿಗಾಲವಿಲ್ಲ ಈ ಕಾಲದಲ್ಲಿ.

ಮಹಿಲಾಶ್ರಮ ಅಲ್ಲಿಂದ ಸ್ವಲ್ಪ ದೂರದಲ್ಲಿದೆ. ಇದು ಶಾಂತಾಬೇನ್ ರಾನೀವಾಲಾ ಹಿಂದುಸ್ಥಾನಕ್ಕೆ ಅರ್ಪಿಸಿದ ಪುಣ್ಯ. ಆಶ್ರಮದ ಅಂತರಂಗ ಆಕೆ. ಆಶ್ರಮದ ಸಾಫಲ್ಯ ಆಕೆಯ ಆನಂದ.

ಶಾಂತಾಬೇನ್ ಆಗರ್ಭ ಶ್ರೀಮಂತಿನಿ. ಮದುವೆಯಾಗಿ ಹೋದದ್ದು ಅದಕ್ಕಿಂತ ಇನ್ನೂ ಶ್ರೀಮಂತರ ಮನೆಗೆ. ಆದರೆ ಮನೆತನದ ಸುಖ ಆಕೆಯ ಪಾಲಿಗೆ ಇರಲಿಲ್ಲ. ಎಳೆಯ ವಯಸ್ಸಿನಲ್ಲೇ ಕತ್ತಲಲ್ಲಿ ಕಾಲಿಟ್ಟ ಜೀವಕ್ಕೆ ಸಮಾಜ ಸೇವೆಯೊಂದೇ ಬೆಳಕಾಯಿತು. ಹಿಂದೂ ಜಾತಿಯಲ್ಲಿ ವಿಧವೆಯರಿಗಿರುವ ಕಷ್ಟ ಸಂಕಟಗಳನ್ನು ಅರಿಯದವರಾರು? ತನ್ನ ಐಶ್ವರ್ಯವನ್ನು ತನ್ನಂತೆ ಅಭಾಗಿನಿಯರಾದ ಹೆಂಗುಸರಿಗಾಗಿ ವಿನಿಯೋಗ ಮಾಡಲು ನಿಶ್ಚಯಿಸಿದಳು. ಆಕೆ ಹುಟ್ಟಿದ್ದು ರಾಜಪುತಾನದಲ್ಲಿ, ಮಾರವಾಡಿಗಳಲ್ಲಿ. ಆ ಸಂಸ್ಕಾರದಿಂದ ಆಕೆ ಪಕ್ಕಾ ಸನಾತನಿಯಾಗಿದ್ದಳು. ತಮ್ಮ ಪಂಗಡದವರಿಗಾಗಿ ಮಾತ್ರ ಬೊಂಬಾಯಲ್ಲಿ ವಿಲ್ಲೆಪಾರ್ಲೆಯಲ್ಲಿ ಹಿಂದೂ ವಿಧವಾಶ್ರಮ

ಎಂದು ಒಂದು ಸಂಸ್ಥೆಯನ್ನು ಮೊದಲು ಮಾಡಿದರು. ೧೯೩೦ರಲ್ಲಿ ಬೊಂಬಾಯಿಯಲ್ಲಿ ಸತ್ಯಾಗ್ರಹ ಆರಂಭವಾದಾಗ ಅಲ್ಲಿಂದ ಸಂಸ್ಥೆಯನ್ನು ಬದಲಾಯಿಸಬೇಕಾಯಿತು. ಜಮುನಾಲಾಲರ ಸೂಚನೆಯಂತೆ ವರ್ಧಾಕ್ಕೆ ಅದನ್ನು ತರಲಾಯಿತು.

ಜಮುನಾಲಾಲರು ರಾನೀವಾಲಾ ಮನೆತನಕ್ಕೆ ಮೊದಲಿಂದಲೂ ಆಪ್ತರು. ಶಾಂತಾ ಬೇನ್ ವಿಧವಾಶ್ರಮದಲ್ಲಿ ತನ್ನ ಭವಿಷ್ಯವನ್ನು ಬೆಳಗಿಕೊಳ್ಳುವ ಏರ್ಪಾಡು ಮಾಡಿದಾಗ ಅದರ ಪಾರುಪತ್ಯಗಾರರಲ್ಲಿ (ಟ್ರಸ್ಟೀ) ಅವರೂ ಒಬ್ಬರಾಗಿದ್ದರು. ವಿಧವೆಯರಿಗಾಗಿ, ಅದರಲ್ಲೂ ಸ್ವಜಾತಿಗಾಗಿ, ಸಂಸ್ಥೆ ನಡಸುವುದಕ್ಕಿಂತ ಹೆಂಗಸರಿಗಾಗಿ--ಕನ್ಯೆ, ವಿಧವೆ, ಸಧವೆ ಎಲ್ಲರಿಗೂ—ಮತ್ತು ಸಕಲ ಹಿಂದೂ ಸಮಾಜಕ್ಕಾಗಿ ಅದನ್ನು ಆಶ್ರಯ ಸ್ಥಾನವನ್ನಾಗಿ ಮಾಡುವುದು ಯೋಗ್ಯವೆಂದು ಜಮುನಾಲಾಲರ ಮನಸ್ಸಿನಲ್ಲಿತ್ತು. ಆದರೆ ಶಾಂತಾ ರಾನೀವಾಲಾಳ ಸಂಪ್ರದಾಯಮೌಢ್ಯ ಹೋಗುವವರೆಗೆ ಅದು ಸಾಧ್ಯವಿರಲಿಲ್ಲ. ಮೆಲ್ಲನೆ ರಾಜಸ್ಥಾನೀ ವಿಧವೆಯರಿಂದ ಹಿಂದೂ ವಿಧವೆಯರು, ಆಮೇಲೆ ಕನ್ಯೆಯರು, ಕಡೆಗೆ ಸಧವೆಯರು— ಹೀಗೆ "ಹಿಂದೂ ಮಹಿಲಾಶ್ರಮ" ವನ್ನಾಗಿ ಮಾಡಿದರು. ಮುಂದೆ ಗಾಂಧೀಜಿಯ ಕೈವಾಡದಲ್ಲಿ ಹಿಂದೂಜನರಿಗಾಗಿ ಎಂಬ ಸಂಕುಚಿತ ಭಾವನೆಯೂ ಹೋಯಿತು. ಕೆಲವು ದಿನ ಡಾ|| ಖಾನ ಸಾಹೇಬರ ಮಗಳು ಇಲ್ಲಿರುತ್ತಿದ್ದಳು.

ಮಹಿಲಾ ಆಶ್ರಮದಲ್ಲಿ ಈಗ ೬೦ ಜನ ಸೋದರಿಯರಿದ್ದಾರೆ. ಆಶ್ರಮವೇ ಎಲ್ಲರ ವೆಚ್ಚವನ್ನು ವಹಿಸುತ್ತದೆ. ಒಬ್ಬರಿಬ್ಬರು ತಮ್ಮ ವೆಚ್ಚವನ್ನು ತಾವೇ ಕೊಡುವವರೂ ಇದಾರೆ. ೧೪ ವರ್ಷಕ್ಕೆ ಕಡಿಮೆಯಾದ ಚಿಕ್ಕ ಹುಡುಗಿಯರನ್ನು ಸೇರಿಸುವುದಿಲ್ಲ. ಆಶ್ರಮದಲ್ಲಿ ಶಿಕ್ಷಣ ಮಾಧ್ಯಮ ಹಿಂದೀ. ಇಲ್ಲಿ ನೋಡಬೇಕಾದುದು ಅವರ ಜೀವನ ಕ್ರಮ. ಬೆಳಗ್ಗೆ ೪ ಘಂಟೆಗೆ ಎದ್ದು ಎಲ್ಲರೂ ಸೇರಿ ಪ್ರಾರ್ಥನೆ ಮಾಡುತ್ತಾರೆ. ಸಂಜೆ ೭ ಕ್ಕೊಮ್ಮೆ. ಆ ಹೊತ್ತಿನಲ್ಲಿ ಆಗಾಗ ಯಾರಾದರೂ ಹಿರಿಯರು ನಾಲ್ಕು ಮಾತು ಪ್ರವಚನ ಹೇಳುವುದೂ ಉಂಟು. ಆಶ್ರಮ ಜೀವನದಲ್ಲಿ ಒಡೆದು ಕಾಣುವುದು ಅವರ ಸ್ವಾವಲಂಬನ ಸಿದ್ಧಾಂತ. ಅಡಿಗೆ ಅದಕ್ಕಾಗಿ ಹಿಟ್ಟು,

ನೀರು ಎಲ್ಲಾ,ಅವರೇ ಮಾಡಬೇಕು. ಅವರ ಉಡಗೆ ತೊಡಿಗೆ ತಾವೇ ನೂತ ನೂಲಿನ ಖಾದಿಯದಾಗಿರಬೇಕು. ಖಾದೀ ತೊಡದವರಿಗೆ ಅಲ್ಲಿ ಪ್ರವೇಶವೇ ಇಲ್ಲ. ದಿನವೂ ಮಧ್ಯಾಹ್ನ ಎಲ್ಲರೂ ಸಾಮೂಹಿಕವಾಗಿ ನೂಲ ಬೇಕು. ಕಸ ಮುಸರೆ, ಅರಿವೆ ಅಂಚಡಿ ಎಲ್ಲಾ ಅವರದೇ. ಪಾಯಖಾನೆ ಸ್ವಚ್ಛಮಾಡಿಕೊಳ್ಳುವುದೂ ಅವರಿಗೆ ಸೇರಿಮದೇ.

ಎಲ್ಲ ಪ್ರಾಂತಗಳ ಭಗಿನಿಯರೂ ಇದಾರೆ. ಗುಜರಾತು, ಮಹಾ ರಾಷ್ಟ್ರದವರೇ ಹೆಚ್ಚು.

*  *  *

ಅತಿಥಿಭವನದಲ್ಲಿ ಕಾಫೀ ಸಮಾರಾಧನೆಯಲ್ಲಿ ತೊಡಗಿದ್ದೆವು. ಆಗ ಒಬ್ಬ ನಡು ಹರೆಯದ ಇಂಗ್ಲೀಷು ಮನುಷ್ಯ ಬಂದರು. ನಾವು ಅಷ್ಟಾಗಿ ಗಮನಿಸಲಿಲ್ಲ. ಹತ್ತಾರು ಜನ ಬಂದು ಹೋಗುತ್ತಿರುತ್ತಾರೆ. ಎಲ್ಲರನ್ನೂ ಎಲ್ಲಿ ಮಾತಾಡಿಸುತ್ತ ಕೂಡುವುದು.

ಆದರೆ ಈ ಭಾವನೆ ಬಹಳ ಹೊತ್ತು ಉಳಿಯಲಿಲ್ಲ. ತಿರುಗಿ ನೋಡಿ ದಾಗ ಅತಿಥಿಭವನದ ಅಂಗಳದಲ್ಲಿ ಆತ ಬರಿಗಾಲಿನಿಂದ ಓಡಾಡುತ್ತಿರುವುದು ಕಂಡಿತು. ಆ ಅಂಗಳದ ಹರಳಿನ ಬಗ್ಗೆ ಮೊದಲೇ ಹೇಳಿದೇನೆ. ಮೇಲೆ ಇದು ಇಂಗ್ಲೀಷು ಕಾಲು. ಅಡಿಗೆ ಮನೆಯಲ್ಲೂ ಬೂಟು ಹಾಕಿಕೊಂಡು ಓಡಾಡುವ ಜಾತಿ. ನನಗಾದ ಆಶ್ಚರ್ಯ, ಹುಟ್ಟಿದ ಕುತೂಹಲ ಅಷ್ಟಿಷ್ಟಲ್ಲ. ಯಾರು ಎಂದು ವಿಚಾರಿಸಿದೆ.

ಅವರೇ ಎಲ್ವಿನ್ ಎಂದು ಗೊತ್ತಾಯಿತು.

ಫಾದರ್ ವೆರಿಯರ್ ಎಲ್ವಿನ್ ಎಲ್ಲಾ ಪಾದರಿಗಳಂತೆ ಹಿಂದುಸ್ಥಾನಕ್ಕೆ ಕ್ರಿಸ್ತನ ದೀಕ್ಷೆಯನ್ನು ಕೊಡಲು ಬಂದವರು. ಹಿಂದುಸ್ಥಾನ ಅಜ್ಞಾನ ಸಮುದ್ರದಲ್ಲಿ ಮುಳುಗಿದ ದೇಶ. ಹಿಂದೂ ಧರ್ಮ ಒಂದು ಕಣ್ಣುಕಟ್ಟು. ಇಲ್ಲಿನ ಜನರನ್ನು ಕ್ರಿಸ್ತ ಮಾರ್ಗಕ್ಕೆ ತಿರುಗಿಸದೆ ಅವರಿಗೆ ಮುಕ್ತಿಯಿಲ್ಲ ಎಂಬುದು ಪಾದರಿಗಳ ನಂಬಿಗೆ. ವೆರಿಯರ್ ಹರೆಯದ ಉತ್ಸಾಹದಲ್ಲಿ ಹಿಂದುಸ್ಥಾನಕ್ಕೆ ಬಂದರು. ಹಿಂದೂ ಜನ, ಹಿಂದೂ ಧರ್ಮಗಳನ್ನು ಚೆನ್ನಾಗಿ ಪರಿಶೀಲಿಸಿದರು. ದೀನಬಂಧು ಆಂಡ್ರೂಸರ ಪರಿಚಯ ಮೊದ ಲಿಂದ ಇತ್ತು. ಅವರ ಮೂಲಕ ಗಾಂಧೀಜಿಯ ಪರಿಚಯವಾಯಿತು.

ಕ್ರಿಸ್ತದೀಕ್ಷೆಯನ್ನು ಜನರಿಗೆ ಕೊಡಲಿ ಬಿಡಲಿ, ಜನರೊಡನೆ ಒಂದಾಗಿ ಅವರಂತೆಯೇ ಬದುಕಿ ಬಾಳದಿದ್ದರೆ ಅವರ ಮನವನ್ನು ಒಲಿಸುವುದು ಸಾಧ್ಯ ವಿಲ್ಲವೆಂಬುದು ಅವರಿಗೆ ಮಂದಟ್ಟಾಯಿತು. ಕೂಡಲೆ ಜೀವನದಲ್ಲಿ ಸರಳತೆ ಯನ್ನು ತರಲು ಮೊದಲಿಟ್ಟರು.

ಪಟ್ಟಣದ ಜನ ಅಷ್ಟೋ ಇಷ್ಟೋ ವಿದ್ಯೆ ಕಲಿತವರು. ಇಂದಲ್ಲ ನಾಳೆ ಅವರಿಗೆ ಜ್ಞಾನಾರ್ಜನೆಗೆ ಹಾದಿಗಳಿವೆ. ಹಳ್ಳಿಯ ಜನಕ್ಕೆ ದಾರಿಯಿಲ್ಲವಲ್ಲ. ಅವರನ್ನು ಹಾದಿಗೆ ತರುವುದು ಹೆಚ್ಚು ಅಗತ್ಯವಲ್ಲವೆ. ವೆರಿಯರ್ ಹಾಗೆ ಯೋಚಿಸಿದ್ದೇ ತಡ ಹಳ್ಳಿಗರಾದರು. ಹಳ್ಳಿಯ ಜನರೊಡನೆ ಬೆರೆತಾಗ ಅವರಿಗೆ ತಿಳಿಯಿತು; ಅಜ್ಞಾನಿಗಳಾದರೂ ಅವಿದ್ಯಾವಂತರಾದರೂ ಈ ಜನರಲ್ಲಿ ಅಗಾಧವಾದ ಸಂಸ್ಕೃತಿಯ ಸೆಲೆಯೊಂದಿದೆ. ಅದು ಬತ್ತಿಲ್ಲ, ಬತ್ತ ಲಾರದು. ಕ್ರಿಸ್ತ ದೀಕ್ಷೆಯನ್ನು ಕೊಡಬೇಕೆಂದು ಬಂದವರು ಈ ಗ್ರಾಮ ಸಂಸ್ಕೃತಿಗೆ ಮನಸೋತರು.

ಇರುವ ಬಳ್ಳಿಯನ್ನು ಕಿತ್ತುಹಾಕಿ ಹೊಸದನ್ನು ನೆಡುವುದು ಸರಿಯಲ್ಲ. ಹೊಸದು ಬೆಳೆದೀತೋ ಇಲ್ಲವೋ? ಇದ್ದುದನ್ನೇ ಪೋಷಿಸಿ ಬೆಳೆಸಬೇಕು. ಈ ಹಿಂದೂ ಜನರನ್ನು ತಮ್ಮ ಸಂಸ್ಕೃತಿಯಲ್ಲೇ ಮತ್ತಷ್ಟು ಯೋಗ್ಯರಾಗಿ ಬೆಳೆಯುವಂತೆ ಮಾಡಬೇಕು ಎಂದು ವೆರಿಯರ್ ಸಂಕಲ್ಪ ಮಾಡಿದರು. ಪಾದರಿಗಳಲ್ಲಿ ಈ ಅಭಿಪ್ರಾಯವನ್ನು ಪ್ರಚಾರ ಮಾಡಿದರು. ಕ್ರಿಸ್ತ ಸೇವಾ ಸಂಘವೆಂಬ ಸಂಸ್ಥೆಯನ್ನು ಪ್ರಾರಂಭಿಸಿದರು.

ಕ್ರಮೇಣ ಇವರ ದೃಷ್ಟಿ ಕಾಡುಜನರ ಕಡೆಗೆ ಹರಿಯಿತು. ನಮ್ಮ ದೇಶದ ಕಾಡುಜನರೆಂದರೆ ದೇವರಿಗೂ ಬೇಡಾದ ಅಸ್ಪೃಶ್ಯರು. ಊರುಗಳಲ್ಲಿ ವಸತಿಗಳಲ್ಲಿ ಇರುವ ಭಾಗ್ಯವೂ ಅವರಿಗಿಲ್ಲ. ಬೆಟ್ಟ ಗುಡ್ಡಗಳಲ್ಲಿ ಹಿಂಡು ಹಿಂಡಾಗಿ ಇದ್ದು ಉದುರಿಹೋಗುತ್ತಿದಾರೆ ಅಡವಿ ಮೃಗಳಂತೆ. ಮಧ್ಯ ಹಿಂದುಸ್ಥಾನದ ಭಿಲ್ಲರು ಈ ಗುಂಪಿಗೆ ಸೇರಿದ ಸಾಹಸಿಗಳು. ಇತಿಹಾಸ ದಲ್ಲೂ ಅವರಿಗೆ ಪ್ರವೇಶ ಸಿಕ್ಕಿದೆ. ಆ ಜನರಲ್ಲಿ ಹೋಗಿ ಸೇರಿದರು ವೆರಿಯರ್. ಅವರ ಭಿಲ್ಲಸೇವಾ ಮಂಡಲದ ಉದ್ದೇಶ ಆ ಜನರಲ್ಲಿ ಸ್ವಲ್ಪ ಸಂಸ್ಕೃತಿಯ ಬಿತ್ತಬೇಕೆಂಬುದು; ಅವರ ಬಾಳನ್ನು ಮೇಲಿನ ಮಟ್ಟಕ್ಕೆ ಏರಿಸುವುದು. ತ್ರಿಪುರಿ ಕಾಂಗ್ರೆಸ್ಸಿಗೆ ವೆರಿಯರ್ ತಮ್ಮ ಭಿಲ್ಲರ ಗುಂಪೊಂದನು

ಕರೆದು ತಂದಿದ್ದರು. ಅವರ ನೃತ್ಯ ನಾಟ್ಯಗಳಿಂದ ತ್ರಿಪುರಿಯ ಜನ ಸಂದೋಹಕ್ಕೆ ಎಷ್ಟೋ ಉಲ್ಲಾಸವಾಯಿತು.

ಹಿಂದುಸ್ಥಾನದಲ್ಲಿ ಈಸಾಯಿಗಳೂ ಏನು ಕಡಿಮೆಯಿಲ್ಲ. ಆದರೆ ಪಾದರಿಗಳ ಪ್ರಭಾವದಿಂದ ಅವರೆಲ್ಲ ತಮ್ಮ ತಾಯಿನಾಡಿಗೇ ಅಪರಿಚಿತರಾಗಿ, ಪರದೇಶಿಗಳಾಗುವ ಹೊತ್ತು ಬಂದಿತ್ತು. ಮನೆಯಲ್ಲಿ ಇಂಗ್ಲೀಷು ಮಾತು. ಊಟ ಉಡಿಗೆ ಸಾಹೇಬರಂತೆ. ಎಲ್ಲ ವಿಧದಲ್ಲೂ ಕಪ್ಪುದೊರೆಗಳಾದರು. ಈ ಆತ್ಮನಾಶನ ಕೆಲವು ಜನ ಪಾದರಿಗಳಿಗೆ ಸರಿ ಕಾಣಲಿಲ್ಲ. ಹಿಂದುಸ್ಥಾನದ ಈಸಾಯಿಗಳು ಕ್ರಿಸ್ತನನ್ನು ನಂಬಿ ದೇಶೀ ಸಂಸ್ಕೃತಿಯನ್ನು ಬಿಡಬೇಕಾಗಿಲ್ಲ. ಹಿಂದೀ ಜನ ಅವರು. ಹಿಂದೀ ಜನರಂತೆ ಇರಬೇಕು ಎಂದು ಚಳುವಳಿ ಹೂಡಿದರು ಈಸಾಯಿಗಳ ನಡೆನುಡಿ, ಪೂಜೆ ಪುರಸ್ಕಾರಗಳಲ್ಲಿ ದೊಡ್ಡ ವ್ಯತ್ಯಾಸವೊಂದು ಬಂತು. ಜೈನ, ಬೌದ್ಧ ಲಿಂಗಾಯತರಂತೆ ಈಸಾಯಿಗಳೂ ಕ್ರಮೇಣ ಹಿಂದೂ ಜನರಲ್ಲಿ ಒಂದು ಪಂಗಡವಾಗಬಹುದೇನೋ ಎನಿಸಿತು.

ಈ ಪುನರುಜ್ಜೀವನಕ್ಕೆ ಕಾರಣರಾದವರಲ್ಲಿ ವೆರಿಯರ್ ಬಹಳ ಮುಖ್ಯರಾದವರು. ಅವರ ಕ್ರಿಸ್ತಸೇವಾ ಸಂಘ ಈ ಹಾದಿಯಲ್ಲಿ ಬಹಳ ಕೆಲಸ ಮಾಡಿದೆ. ಆದರೆ ಇವೆಲ್ಲದರ ಹಿಂದೆ, ಹಿನ್ನೆಲೆಯಲ್ಲಿ ಗಾಂಧೀಜಿಯ ಪ್ರಭಾವ ಪ್ರಯತ್ನಗಳನ್ನು ಕಂಡುಕೊಂಡರೆ ಚಿತ್ರ ಪೂರ್ಣವಾಗುತ್ತದೆ.

ವೆರಿಯರ್ ಎಲ್ವಿನ್ನರ ತಂಗಿ ಅಂದೇ ಇಂಗ್ಲೆಂಡಿನಿಂದ ಬಂದಿದ್ದಳು, ಓದು ಮುಗಿಸಿ. ಹಿಂದುಸ್ಥಾನದಲ್ಲಿ ಅಣ್ಣನಿಗೆ ಬೆಂಬಲವಾಗಿ ದೀನಸೇವೆಗೆ ನಿಲ್ಲುವ ಮೊದಲು ಬಾಪೂಜಿಯ ಆಶೀರ್ವಾದ ಬೇಕು. ಗಾಂಧೀಜೀಯ ದರ್ಶನವಾಗಬೇಕು. ಅದಕ್ಕಾಗಿಯೇ ಅವರಿಬ್ಬರೂ ಬಂದಿದ್ದರು.

ವರ್ಧಾ ಒಂದು ರೀತಿಯಿಂದ ಸಂಗಮ ಕ್ಷೇತ್ರ. ಎಲ್ಲ ನದಿಗಳೂ ಇಲ್ಲಿ ಕಲೆಯುತ್ತವೆ.

—: o :—

# ವರ್ಕಿಂಗ್ ಕಮಿಟಿ

ವರ್ಕಿಂಗ್ ಕಮಿಟಿ ಸೇರಿದಾಗ ನೋಡಬೇಕು ವರ್ಧಾ! ಎತ್ತ ನೋಡಿದರೂ ಗಲಿಬಿಲಿ, ಎಲ್ಲ ಕಡೆಗೂ ಕೆಲಸ. ಹೊಸದೊಂದು ಲೋಕವೇ ತಯಾರಾಗುತ್ತದೆ.

ಎಲ್ಲರಿಗಿಂತ ಮೊದಲು ಬರುವವರು ಸುದ್ದಿಗಾರರು. ಅಸೋಸಿಯೇಟೆಡ್ ಪ್ರೆಸ್, ಯುನೈಟೆಡ್ ಪ್ರೆಸ್ ಎಂದು ಹಿಂದುಸ್ಥಾನದಲ್ಲಿ ಎರಡು ವಾರ್ತಾಪ್ರಸಾರಕ ಸಂಸ್ಥೆಗಳಿವೆ. ನಾವು ದಿನವೂ ಪತ್ರಿಕೆಗಳಲ್ಲಿ ಓದುವ ಸುದ್ದಿಯಲ್ಲಿ ಬಹುಭಾಗ ಪತ್ರಿಕೆಗಳಿಗೆ ಇವರು ಕಳಿಸಿದ್ದು. ಇವರು ದೇಶದ ಎಲ್ಲಾ ಪತ್ರಿಕೆಗಳಿಗೂ ಸುದ್ದಿ ಕಳಿಸುತ್ತಾರೆ. ಆದುದರಿಂದಲೇ ಮುಖ್ಯವಾದ ಸುದ್ದಿ ಎಲ್ಲ ಪತ್ರಿಕೆಗಳಲ್ಲೂ ಒಂದೇ ರೀತಿಯಾಗಿರುತ್ತದೆ. ವರ್ಧಾದಲ್ಲಿ ಇವರ ಕಡೆಯ ಸುದ್ದಿಗಾರರಿದ್ದರೂ ವರ್ಕಿಂಗ್ ಕಮಿಟಿಯ ಆ ಸಭೆಯ ಹೊತ್ತಿಗೆ ಪ್ರತ್ಯೇಕವಾಗಿ ಯಾರಾದರೊಬ್ಬ ನುರಿತ ಸುದ್ದಿಗಾರನನ್ನು ಕಳಿಸುತ್ತಾರೆ. ಇವರಲ್ಲದೆ ಟೈಮ್ಸ್ ಆಫ್ ಇಂಡಿಯಾ, ಹಿಂದೂ, ದೆಹಲಿಯ ಹಿಂದುಸ್ಥಾನ್ ಟೈಮ್ಸ್, ಈ ಪತ್ರಿಕೆಗಳೂ ತಮ್ಮ ವಿಶೇಷ ಸುದ್ದಿಗಾರರನ್ನು ಕಳಿಸುತ್ತಾರೆ. ಇವರಲ್ಲದೆ ಪತ್ರಿಕೆಗಳಿಗೆ ಚಿತ್ರಗಳನ್ನು ಕಳಿಸುವ ಪತ್ರಿಕಾ ಛಾಯಾ ಚಿತ್ರಕಾರರೂ ಬರುತ್ತಾರೆ. ಅವರು ಬಾರದಿದ್ದರೆ ಈಗ ಪತ್ರಿಕೆಗಳಲ್ಲಿ ನಾವು ನೋಡುವ ಅನೇಕ ಚಿತ್ರಗಳು ಸಿಗದೆ ಹೋಗುತ್ತವೆ. ನಾಯಕರಲ್ಲಿ ಯಾರಾದರೂ ನಕ್ಕರೆ ಸಾಕು ಇವರ 'ಕ್ಯಾಮೆರಾ' ಸಿದ್ಧ. ಗಡಿನಾಡಿನ ಗಾಂಧೀ ಒಮ್ಮೆ ದೇವದಾಸ ಗಾಂಧಿಯ ಮಗುವಿನೊಡನೆ ಆಡುತ್ತಿದ್ದರು. ಮಾರನೆಯ ದಿನ ಪತ್ರಿಕೆಯಲ್ಲಿ ಆ ಚಿತ್ರ. ಊಟ ಮಾಡುತ್ತಿದ್ದರೂ ಬಿಡುವುದಿಲ್ಲ. ಇದೊಂದು ರೀತಿಯ ಚಿತ್ರಗುಪ್ತನ ಚಿತ್ರಾವತಾರ!

ಹತ್ತು ಹನ್ನೆರಡು ವರ್ಕಿಂಗ್ ಕಮಿಟಿ ಸಭೆಗಳು ನಡೆದುದನ್ನು ನೋಡಿದೇನೆ. ಕಾಂಗ್ರೆಸ್ಸಿನಲ್ಲೂ ಗಮನಿಸಿದೇನೆ. ಈ ಸುದ್ದಿಗಾರರೆಲ್ಲ ಸಾಧಾರಣವಾಗಿ ದಕ್ಷಿಣದವರು. ಕನ್ನಡಿಗರೂ ಒಬ್ಬಿಬ್ಬರಿರಬಹುದು. ದೆಹಲಿಯಲ್ಲಿ

ಹಿಂದೂ ಸುದ್ದಿಗಾರರಾಗಿ ಹೆಸರಾದ ಬನಗಲ್ ಶಿವರಾಯರು ಕನ್ನಡಿಗರು, ಮಂಗಳೂರಿನವರು. ಬೊಂಬಾಯಿಯಲ್ಲೂ ಒಬ್ಬರಿಬ್ಬರಿವಾರೆ. ಆದರೆ ಸಾಧಾರಣವಾಗಿ ಸುದ್ದಿಗಾರರೆಂದರೆ ತಮಿಳರು. ರಾಮೇಶ್ವರವಂತೂ ಅವರದೇ. ಪಂಜಾಬಿನಲ್ಲೂ ಅವರೇ! ಅಸೋಸಿಯೇಟೆಡ್ ಪ್ರೆಸ್, ಟ್ರೈಮ್ಸ್ ಆಫ್ ಇಂಡಿಯಾ ಎರಡೂ ವಿಲಾಯಿತಿಯವರವು. ಇವೆರಡರಲ್ಲೂ ಕೈವಾಡ ಮಾತ್ರ ಕುಂಭಕೋಣಂ ಜನರದು. ನಾಗಪುರ, ಶುದ್ಧ ಮಹಾರಾಷ್ಟ್ರ ಸೀಮೆ. ಅಲ್ಲಿ ಇರುವ ಎರಡು ಇಂಗ್ಲೀಷ್ ಪತ್ರಗಳಿಗೂ ತಮಿಳರು ಸಂಪಾದಕರು. ರಾಷ್ಟ್ರಭಾಷೆಯೆಂದು ಹಿಂದಿಯನ್ನು ಅಟ್ಟಕ್ಕೇರಿಸುವ ಪ್ರಯತ್ನ ಇವರ ಸರ್ವವ್ಯಾಪಕತೆಗೆ ಒಂದು ರಾಮಬಾಣವೇನೋ ಎನಿಸುತ್ತದೆ.

ಸುದ್ದಿಗಾರರ ಜೊತೆಯಲ್ಲಿ ಹರಟೆ ಹೊಡೆಯುತ್ತ ಅತಿಥಿ ಭವನದ ಅಂಗಳದಲ್ಲಿ ಕಾಣುವ ಮತ್ತೊಂದು ಗುಂಪು ನಾಯಕರ ಕಾರ್ಯದರ್ಶಿಗಳು. ಇವರು ಹೆಚ್ಚು ಕಡಿಮೆ ನಾಯಕರ ಮನೆಯವರೇ ಆಗಿಬಿಡುತ್ತಾರೆ. ಇಲ್ಲದಿದ್ದರೆ ಈ ಹೊತ್ತು ಗೊತ್ತಿಲ್ಲದ, ಇಪ್ಪತ್ತನಾಲ್ಕು ತಾಸು ಜೀನು ಹಾಕಿಕೊಂಡು ನಿಲ್ಲುವ ಬಾಳು ಇತರರಿಗೆ ಸಾಧ್ಯವಾಗದು. ವರ್ಧಾಕ್ಕೆ ಹೋಗುವ ಮೊದಲು ಮಹಾನಾಯಕರ ಕಾರ್ಯದರ್ಶಿತ್ವದ ಬಗ್ಗೆ ಸುಂದರ ಕಲ್ಪನೆ ಕಟ್ಟಿಕೊಂಡಿದ್ದೆ. ಈಚೆಗೆ ಅಭಿಪ್ರಾಯ ಬದಲಾಗಿದೆ.

ಇವರೆಲ್ಲರಿಗಿಂತ ಮುಖ್ಯವಾಗಿ ಕಾಣಿಸುವ ವ್ಯಕ್ತಿ ಶ್ರೀಮತಿ ಮಣಿಬೇನ್. ಈಕೆ ಸರದಾರ ವಲ್ಲಭಭಾಯಿಯ ಒಬ್ಬಳೇ ಮಗಳು. ನೋಡಲಿಕ್ಕೂ ಸಾಮಾನ್ಯವಾಗಿ ಹಾಗೇ ಕಾಣಿಸುತ್ತಾಳೆ. ಸ್ವಭಾವದಲ್ಲಿ ಸರದಾರರ ಮಗಳೇ ಸರಿ. "ಪುತ್ರಾದಿಚ್ಛೇತ್ ಪರಾಜಯಂ" ಎಂದು ವಾಕ್ಯವಿದೆ. ನಿಜವಾಗಿ ವಲ್ಲಭಭಾಯಿ ಮಗಳ ಮುಂದೆ ಸೋತು ಹೋಗಿದ್ದಾರೆ.

ವಿಧುರರಾದ ವಲ್ಲಭಾಯಿಗೆ ಈಕೆಯೇ ಎಲ್ಲಾ ಸಹಾಯ. ರಾಜಕೀಯ ಜೀವನದಲ್ಲೂ ಅವರಿಗೆ ನೆರವಾಗುತ್ತಾಳೆ. ಬಾರಡೋಲಿಯ ಸತ್ಯಾಗ್ರಹದ ಕಾಲಕ್ಕೆ ಇನ್ನೂ ವಯಸ್ಸಾಗಿರದಿದ್ದರೂ ಈಕೆ ಬಹಳ ದುಡಿದಳಂತೆ. ಮೊನ್ನಿನ ರಾಜಕೋಟೆಯ ಪ್ರಕರಣದ ನೇತೃತ್ವ ಆಕೆಯ ಕೈಯಲ್ಲೇ ಇತ್ತೆಂದರೂ ಸುಳ್ಳಲ್ಲ. ಅಲ್ಲಿ ಜೈಲಿಗೂ ಹೋಗಿದ್ದಳು.

ವರ್ಕಿಂಗ್ ಕಮಿಟಿ ಸಭೆ ನಡೆಯುವಾಗ ಹೊರಬಾಗಿಲಲ್ಲಿ ಈಕೆಯ ಸ್ಥಾನ. ಈ ದ್ವಾರದೇವತೆಯನ್ನು ಜಯಿಸದೆ ಯಾರೂ ಒಳಗೆ ಹೋಗುವ ಹಾಗಿಲ್ಲ. ಅರಿಯದೆ ಯಾರಾದರೂ ಅಲ್ಲಿಗೆ ಹೋಗುವ ಸಾಹಸ ಮಾಡಿದರೆ ಅವರ ಮನಸಿನ ಗಾಯ ಬೇಗ ಮಾಸುವುದಿಲ್ಲ. ಸುದ್ದಿಗಾರರಿಗಂತೂ ಈಕೆಯನ್ನು ಕಂಡರೆ ಗಾಬರಿ.

ನಿಜವಾಗಿ ವರ್ಕಿಂಗ್ ಕಮಿಟಿ ನಡೆಯುವ ಕಾಲದಲ್ಲಿ ಏನಾದರೊಂದು ಮುಖ್ಯವಾದ ಕೆಲಸವಿಲ್ಲದಿದ್ದರೆ ಆ ವಾತಾವರಣದಲ್ಲಿ ಬದುಕುವುದೇ ಕಷ್ಟ. ಎಲ್ಲರೂ ಯಾವುದೋ ಒಂದು ಕೆಲಸದಲ್ಲಿ ತೊಡಗಿರುತ್ತಾರೆ ನಾಯಕರಲ್ಲಿ ಜವಾಹರಲಾಲರಿಗೆ ಸದಾ ಯೋಚನೆ. ತೀರ್ಮಾನಗಳನ್ನು ಅಣಿಮಾಡುವುದು, ಚರ್ಚಿಸುವುದು ಅವರ ಕೆಲಸ ತಾನೆ. ಸಾಲದ್ದಕ್ಕೆ ಇಡೀ ಜಗತ್ತಿನ ಗತಿ ಅವರ ಮನಸ್ಸಿನಲ್ಲಿ ಸದಾ ಮೂಡುತ್ತಾ ಇರುತ್ತದೆ. ಸರದಾರರದು ಸ್ವಭಾವತಃ ಹೆಚ್ಚು ಉಲ್ಲಾಸದ ಜೀವನವಲ್ಲ. ರಾಜೇಂದ್ರ ಬಾಬು ಕಾಹಿಲೆಯವರು. ಅವರು ಸರಳವಾಗಿ ಹಳೆಯ ಗೆಳೆಯರಂತೆ ಮನಬಿಚ್ಚಿ ಮಾತಾಡುವುದನ್ನು ನೋಡಿ ಅವರೊಡನೆ ಮಾತಾಡುವ ಆಸೆಯಾಗುತ್ತದೆ. ಆದರೆ, ನಡುವೆ ಅವರು ಕೆಮ್ಮಿದರೆ ಪಂಚ ಮಹಾಪಾತಕಗಳನ್ನೂ ಮಾಡಿದೆವೆಂದು ನಮ್ಮ ಮನಸ್ಸಿಗೇ ಪಶ್ಚಾತ್ತಾಪವಾಗುತ್ತದೆ. ಮೌಲಾನಾ ಹಿರಿಯರು. ಭೂಲಾಭಾಯಿ ಶ್ರೀಮಂತರು; ಸ್ವಲ್ಪ ಮಡಿ ಹೆಚ್ಚು. ಉಳಿದವರಿಗೆ ಇನ್ನೂ ಹದ ಬಂದಿಲ್ಲ.

ಡಾಕ್ಟರ್ ಪಟ್ಟಾಭಿಯೊಬ್ಬರೇ—ಕೆಲ ಮಟ್ಟಿಗೆ, ಅದೂ ಒಮ್ಮೊಮ್ಮೆ, ಕೃಪಲಾನಿ—ಹೊರಗಿನ ಜನಕ್ಕೆ ಆಸರೆ. ಕಮಿಟಿಯಲ್ಲಿ ಕೂತು ಬೇಸರವಾದಾಗಲೋ, ಕೆಲಸ ಮುಗಿದ ಮೇಲೋ, ಅಂಗಳದಲ್ಲಿ ಬೆಂಚಿನ ಮೇಲೋ, ಅತಿಥಿ ಭವನದ ಮುಂದಿನ ಬಯಲಿನಲ್ಲೋ ಕೂತು ಸುದ್ದಿಗಾರರೊಡನೆ ಇತರರೊಡನೆ ವಿನೋದವಾಗಿ ಹರಟೆ ಹರಡುತ್ತಾರೆ. ಡಾಕ್ಟರರು ಮಾತಿನಲ್ಲಿ ಬಹಳ ಚುರುಕು. ಜೀವನದ ಬಗ್ಗೆ ಜನರ ಬಗ್ಗೆ ಅವರ ಮಿಮರ್ಶೆ ಬಹಳ ಆಳವಾದುದು. ಅವರ ಜ್ಞಾನಭಾಂಡಾರವೂ ಸಾಮಾನ್ಯವಾದುದಲ್ಲ. ಅವರು ಓದಿದುದು, ನಡೆಸಿದುದು ವೈದ್ಯವಾದರೂ ಯಾವ ಇತಿಹಾಸಜ್ಞನಿಗೂ ಇರದಷ್ಟು ಇತಿಹಾಸ ಜ್ಞಾನವಿದೆ. ಇತಿಹಾಸದ ವಿಷಯ ಬಂದರೆ, ಮಾತಿಗೆ

ಮೊದಲು ಇಸವಿ ತಾರೀಖುಗಳನ್ನೇ ಒಗೆಯುತ್ತಾರೆ. ವಾದದಲ್ಲಿ ಸಿಡಿಲು, ಅನೇಕ ಸಲ ಸಂಪಾದಕ ಮಹಾಶಯರು Prince Rupert of debate ಎಂದು ಕರೆದಿದ್ದಾರೆ ಇವರನ್ನು.

ನಿಜವಾಗಿ ಹೇಳಬೇಕೆಂದರೆ ಪಟ್ಟಾಭಿ ಮಾತಾಡುವುದಿಲ್ಲ, ವ್ಯಾಖ್ಯಾನ ಮಾಡುತ್ತಾರೆ. ಅದೂ ಸರಳವಾದ ನೇರವಾದ ಧಾರೆಯಲ್ಲ. ವೈಯಾಕರಣಿಯ ಗೊಂದಲವಿದ್ದಂತೆ. synonyms-antonyms, ಅಭೇದ ವಿಭೇದಾರ್ಥಕ ಶಬ್ದಗಳ ಪಟ್ಟಿಯನ್ನು ಮಳೆಸುರಿದಂತೆ ಸುರಿಸುತ್ತಾರೆ, ಒಮ್ಮೆ ಅಖಿಲ ಭಾರತ ಸಂಸ್ಥಾನ ಪರಿಷತ್ತಿನ ಸ್ಥಾಯೀಸಮಿತಿಯ ಅಧಿವೇಶನಗಳ ಬಗ್ಗೆ ಅವರಿಗೊಂದು ಪತ್ರ ಬರೆದಿದ್ದೆ. ನಮ್ಮ ಸಭೆಗಳು ಇತರ ಮಹತ್ವದ ಸಭೆಗಳ ಗೊಂದಲದಲ್ಲೇ ಸೇರುವುದರಿಂದ ಸಾಕಷ್ಟು ಕೆಲಸವಾಗುವದಿಲ್ಲವೆಂತ. ಅದಕ್ಕವರು ಉತ್ತರ ಬರೆದರು. "However much we may try to isolate our meetings they will be surounded, preceded and succeeded by a number of public engagements of a political nature." ಈ ವಾಕ್ಯವಿನ್ಯಾಸ ಅವರದೇ ಸರಿ. ಬರೆದಂತೆಯೇ ಮಾತು.

ವರ್ಕಿಂಗ್ ಕಮಿಟಿಯ ನಾಯಕರಲ್ಲಿ ಸುದ್ದಿಗಾರರ ಬೆಳಕೆಂದರೆ ಪಟ್ಟಾಭಿಯೊಬ್ಬರೇ. ಹಾಗಿಷ್ಟು ಹೀಗಿಷ್ಟು, ಹರಟುತ್ತ ನಗುತ್ತ ಸುದ್ದಿ ಹೇಳುತ್ತಾರೆ. ಉಳಿದವರು ಯಾರೂ ಇವರನ್ನು ಹತ್ತಿರ ಬರಗೊಡಿಸುವುದೇ ಇಲ್ಲ. ಪತ್ರಿಕಾ ಪ್ರಪಂಚಕ್ಕೆ ಸರಿಯಾದ ಬೆಲೆ ಕೊಡುವುದು ಅವರೊಬ್ಬರಿಗೇ ಗೊತ್ತಿದ್ದಂತಿದೆ. ಮುಖ್ಯವಾಗಿ ಆ ಮಾತಿನಲ್ಲಿ ಗೆಳೆಯರಂತೆ ನಡೆಯುತ್ತಾರೆ. ತಮ್ಮ ತಲೆಯ ಮೇಲೆ ಇರುವ ಕಿರೀಟದ ನೆನಪಾಗುವುದಿಲ್ಲ.

ಇದು—ಈ ಅನಾಸಕ್ತಿ ಇವರ ಪ್ರಧಾನ ಗುಣ. ಅಂತಲೇ ಇವರು ಕೆರಳಿದುದನ್ನು ಎಂದೂ ಯಾರೂ ಕಂಡಿಲ್ಲ. ಎಂಥ ದುರ್ಘಟನೆಯನ್ನಾಗಲಿ ನಗುನಗುತ್ತ ತಾಳಿಕೊಳ್ಳುವ ಬಲ ಇವರಿಗಿದೆ. ಹೋದ ವರ್ಷ ವರ್ಕಿಂಗ್ ಕಮಿಟಿಯ ಸದಸ್ಯರು ಎಲ್ಲರೂ ರಾಜಿನಾಮೆ ಕೊಟ್ಟ ಆ ಮಹಾ ಪ್ರಳಯದ ದಿನ ಸಂಜೆಗೆ ಪಟ್ಟಾಭಿ ಮದರಾಸಿಗೆ ಪಯಣವಾಗಿದ್ದರು. ನಿಲು ಮನೆಯಲ್ಲಿ

ಯಾರೋ ಕೇಳಿದರು ; 'ಡಾಕ್ಟರ್, ಬೋಸರಿಗೆ ಬೇನೆ ಬಹಳವಾಗಿ ತ್ರಿಪುರಿಗೆ ಬಾರದಾದರೆ ಕಾಂಗ್ರೆಸ್ಸು ಹೇಗೆ?' ನಗುತ್ತ ಉತ್ತರ ಕೊಟ್ಟರು ಡಾಕ್ಟರರು 'ಮದುಮಗನಿಲ್ಲದೆ ಮದುವೆಯೆ!' ತ್ರಿಪುರಿಯಲ್ಲಿ ನಾಯಕರ ಶಿಬಿರಗಳಿಂದ ನರ್ಮದೆಯ ರಮಣೀಯ ನೋಟವನ್ನು ನೋಡುತ್ತ ನಿಂತಿದ್ದೆವು. ಪಟ್ಟಾಭಿ ಏನೋ ಹೇಳುತ್ತಿದ್ದರು. ಕೃಪಲಾನಿ ಎಲ್ಲಿಂದಲೋ ಬಂದವರೇ "ಏ, ಸೋತುಹೋದ ರಾಷ್ಟ್ರಪತಿ" ಎಂದು ಇವರನ್ನು ಕರೆದರು. ನಿಂತಿದ್ದವರು ನಾವೆಲ್ಲ ದಕ್ಷಿಣದವರು. ಎಲ್ಲರಿಗೂ ಮನಸ್ಸಿಗೆ ಮುಳ್ಳು ನೆಟ್ಟಂತಾಯಿತು. ಆದರೆ ಪಟ್ಟಾಭಿ ಮಾತ್ರ 'ಇಂಥಾ ಕಾರ್ಯದರ್ಶಿ ಇದ್ದರೆ ಮತ್ತೇನಾಗಬೇಕು. ಸದ್ಯ ಉಳಿದವರಿಗೆ ನಿನ್ನ ಪೀಡೆ ತಪ್ಪಿತಲ್ಲ ಇದರಿಂದ' ಎಂದು ತೇಲಿಸಿಬಿಟ್ಟರು.

ದಕ್ಷಿಣದಲ್ಲಿ ಪ್ರಧಾನಿ ರಾಜಗೋಪಾಲಾಚಾರ್ಯರನ್ನು ಬಿಟ್ಟರೆ ಗಾಂಧೀವಾದಿಗಳಲ್ಲಿ ಪಟ್ಟಾಭಿ ಪ್ರಮುಖರು. ಆಚಾರ್ಯರು ಅಮಾತ್ಯರಾದ ಮೇಲಂತೂ ಗಾಂಧೀಜಿಯ ಬರಹಗಳಿಗೆ ವಿಪುಲವಾಗಿ ವ್ಯಾಖ್ಯಾನ ಮಾಡುವ ಕೆಲಸ ಇವರದೇ ಆಗಿದೆ. ಡಾಕ್ಟರರು ಬಹುಶ್ರುತರು, ಬಹು ಸಂಚಾರಿಗಳೂ ಹೌದು. ದೇಶೀ ಸಂಸ್ಥಾನಗಳ ಸಮಸ್ಯೆಯಲ್ಲಿ ತೊಡಗಿಕೊಂಡಮೇಲೆ ಹಿಂದುಸ್ತಾನವನ್ನೆಲ್ಲಾ ಸುತ್ತಿದಾರೆ. ಸಣ್ಣ ಪುಟ್ಟ, ಹಿರಿದು, ಎಲ್ಲ ಸಂಸ್ಥಾನಗಳನ್ನೂ ನೋಡಿದಾರೆ. ಅಲ್ಲಿಯ ಪರಿಸ್ಥಿತಿಗಳನ್ನು ಕೂಲಂಕಷ ವಾಗಿ ಬಲ್ಲರು. ಪಟ್ಟಾಭಿ ಸಂಸ್ಥಾನಗಳ ಸಮಸ್ಯೆಯನ್ನು ತಮ್ಮದಾಗಿ ಮಾಡಿಕೊಳ್ಳುವವರೆಗೆ ಅಖಿಲ ಭಾರತ ಸಂಸ್ಥಾನ ಪರಿಷತ್ತು ಅಗಸ್ತ್ಯ ಭ್ರಾತ ನಂತಿತ್ತು. ಸಂಸ್ಥಾನಗಳ ಚಳುವಳಿ ಯಾರಿಗೂ ಬೇಡಾದ ಸವತಿಯ ಮಗುವಿನಂತಿತ್ತು. ಪಟ್ಟಾಭಿ ಅದರ ಚುಕ್ಕಾಣಿ ಹಿಡಿದಮೇಲೆ ಕಾಂಗ್ರೆಸು ಸಮುದ್ರದಲ್ಲೂ ಈ ದೋಣಿಗೆ ರಹದಾರಿ ಸಿಕ್ಕಿತು. ಒಬ್ಬರೊಬ್ಬರಾಗಿ ನಾಯಕರು ಅತ್ತಕಡೆಗೆ ಓಡಿದರು. ವಲ್ಲಭಭಾಯಿ ಕಾಠಿವಾಡದಲ್ಲಿ, ಜಮುನಾಲಾಲರು ಜಯಪುರದಲ್ಲಿ, ದೇವ ಶಂಕರರಾಯರು ಉತ್ತರ ಕರ್ನಾಟಕ ಸಂಸ್ಥಾನಗಳಲ್ಲಿ ತೊಡಗಿದರು. ಗಾಂಧೀಜೀ ಸಂಸ್ಥಾನಗಳ ತೊಡಕಿನಲ್ಲಿ ಬಂದುದೂ, ಜವಾಹರಲಾಲರು ಅ. ಭಾ. ಸಂ. ಪರಿಷತ್ತಿನ ಅಧ್ಯಕ್ಷ ರಾದುದೂ, ಪಟ್ಟಾಭಿಯ ಪ್ರಭಾವ. ದೇಶೀ ಸಂಸ್ಥಾನಗಳ ಚಳುವಳಿಗೆ

ಇವರು ಒಂದು ಬಗೆಯ ಧರ್ಮಪಿತೃ (Godfather) ಎನ್ನ ಬಹುದು.

ಪಟ್ಟಾಭಿಯ ನಿಶಿತ ಬುದ್ಧಿಗೆ ವೈದ್ಯವೃತ್ತಿ ಸಾಲಲಿಲ್ಲ. ಹತ್ತೇ ವರ್ಷದೊಳಗೆ ಆಯುಷ್ಯದಲ್ಲಿ ಉದರನಿರ್ವಾಹಕ್ಕೆ ಬೇಕಾದಷ್ಟು ಗಳಿಸಿಕೊಂಡು ಸಾರ್ವಜನಿಕ ಸೇವೆಗೆ ಬಿದ್ದರು. ಪತ್ರಿಕಾ ಸಂಪಾದನಕ್ಕೆ ಮೊದಲು ಮಾಡಿದರು. ಅವರ 'ಜನ್ಮ ಭೂಮಿ' ತೆಲುಗರಿಗೆ ಒಂದು ಬೆಳಕಾಗಿತ್ತು. ರಾಷ್ಟ್ರೀಯ ಶಿಕ್ಷಣಕ್ಕಾಗಿ ಹೋರಾಡಿದರು. ಆಂಧ್ರಜಾತೀಯ ಕಳಾಶಾಲೆಯ ಸ್ಥಾಪನೆಗೆ ಇವರೂ ಇವರ ಗೆಳೆಯರೂ ಕಾರಣ.

ಆಂಧ್ರಪ್ರಾಂತ ನಿರ್ಮಾಣಕ್ಕಾಗಿ ಬಲವಾದುದೊಂದು ಚಳುವಳಿ ನಡೆದಿದೆ ತೆಲುಗರಲ್ಲಿ. ಅದಕ್ಕೆ ಪಟ್ಟಾಭಿ ಮುಂದಾಳು ಆಂಧ್ರ ಸಾಹಿತ್ಯ, ಕಲೆಗಳ ಪುನರುಜ್ಜೀವನ ನಡೆದಿದೆ. ಆ ದೀಪಾವಳಿಯಲ್ಲಿ ಇವರದೂ ಒಂದು ದೀಪವಿದೆ.

ಇವರಿಗೆ ಭಾಷೆಗಳನ್ನು ಕಲಿವ ಚಟ ಬಹಳ. ತಮಿಳು ಚೆನ್ನಾಗಿ ಬರುತ್ತದೆ. ಹಿಂದೀ ಕಲಿತಿದಾರೆ. ತೆಲಗು ಇಂಗ್ಲೀಷುಗಳು ತಾಯಿ, ಮಲತಾಯಿಗಳು. ಕನ್ನಡವೂ ಇವರಿಗೆ ಸಾಧಾರಣವಾಗಿ ಪರಿಚಿತವಾದುದು. ಅವರ ಸೊಸೆ ಮೈಸೂರು ಕಡೆಯವರು. ಈಗ ಅವರಿಗೆ ೬೦ ವರ್ಷ. ಈ ವಯಸ್ಸಿನಲ್ಲಿ ಉರ್ದೂ, ಫಾರಸೀಗಳನ್ನು ಕಲಿಯಹತ್ತಿದಾರೆ. ಅವರು ಕ್ಲಿಷ್ಟವಾದ ಫಾರಸೀ ಶಬ್ದಗಳನ್ನು ಬಳಸುತ್ತ, ತೂಕ ಮಾಡಿ, ಗಂಟೆಗೊಂದು ವಾಕ್ಯದಂತೆ ಮಾತಾಡುವುದು ಜನರಿಗೆ ವಿಚಿತ್ರವಾಗಿ ಕಾಣುತ್ತದೆ. ಆದರೆ, ಇವರ ನಗುವಿನಿಂದ ಅವರೇನು ಅಧೀರರಾಗುವುದಿಲ್ಲ. ಗಂಭೀರವಾಗಿ ಹಾಗೇ ಮುಂದರಿಸುತ್ತಾರೆ.

ಈಗ ಇಡೀ ದಕ್ಷಿಣದೇಶಕ್ಕೆ ಇವರೊಬ್ಬರೇ ವರ್ಕಿಂಗ್ ಕಮಿಟಿಯಲ್ಲಿ ಪ್ರತಿನಿಧಿ.

* * * *

ಹರೆಕೃಷ್ಣ ಮೆಹತಾಬರು ಮತ್ತೊಂದು ಬಗೆ, ಈ ಮಂಡಲದಲ್ಲಿ ಇವರೇ ಎಲ್ಲರಿಗಿಂತ ಕಿರಿಯರು. ೩೯ ವರ್ಷ. ಬಲವಾದ ಮೈಕಟ್ಟು, ದೃಢವಾದ ಸಂಕಲ್ಪ. "ಅಡಿಯ ಮುಂದಿಡೆ ಸ್ವರ್ಗ; ಅಡಿಗಡಿಗೆ ಅಶ್ವಮೇಧ

ಫಲ” ಎಂಬ ದಿಟ್ಟತನ, ಕಾರ್ಯದೀಕ್ಷೆ. ೧೯೩೭ರಲ್ಲಿ ಕಾಂಗ್ರೆಸ್ಸಿನವರು ಚುನಾವಣೆಗಳಿಗೆ ನಿಂತಾಗ ಉತ್ಕಲ ಪ್ರಾಂತದಲ್ಲಿ ಅಸಾಧಾರಣವಾದ ವಿಜಯವಾಯಿತು. ಕಾಂಗ್ರೆಸ್ಸಿಗೆ ಇಷ್ಟು ಪ್ರಭಾವವಿದೆಯೇ ಎಂದು ಬಿಳಿಯ ದೊರೆಗಳು ಕಣ್ಣು ಅಗಲ ಮಾಡಿರಬೇಕು. ಈ ಅದ್ಭುತ ವಿಜಯಕ್ಕೆ ಮೆಹತಾಬರ ಸತತ ಪರಿಶ್ರಮ, ಅವರ ಪ್ರಭಾವಗಳೇ ಕಾರಣ. ಈ ಇಪ್ಪತ್ತು ವರ್ಷಗಳಲ್ಲಿ ಕಾಂಗ್ರೆಸ್ ನಾಯಕಮಂಡಲಿಗೆ ಇವರೇ ಮೊದಲನೆ ಉತ್ಕಲದ ಸದಸ್ಯರು.

ಉತ್ಕಲವು ಬಿಹಾರಕ್ಕೆ ಅತುಕೊಂಡೇ ಇದ್ದರೂ ಕಾಂಗ್ರೆಸ್ಸಿನ ಪ್ರಭಾವಕ್ಕೆ ಬೇಗನೆ ಸಿಗಲಿಲ್ಲ. ಉತ್ಕಲದ ವೃದ್ಧಪಿತಾಮಹ ಮಧುಸೂದನ ದಾಸರು ಮಿತವಾದಿಗಳು. ಮಾಂಟಫರ್ಡ್ ಸುಧಾರಣೆಗಳಲ್ಲಿ ಮಂತ್ರಿಗಳಾಗಿ ಕೆಲಸ ಮಾಡಿದರು. ಮುಂದೆ ಗೋಪಬಂಧು ದಾಸರು ಗಾಂಧೀಜಿಯನ್ನು ಅನುಸರಿಸಿ ಆ ಪ್ರಾಂತದಲ್ಲಿ ಸುಂಟರಗಾಳಿಯೆಬ್ಬಿಸಿದರು. ಆಗ ಮೆಹತಾಬರು ಈ ಸುಳಿಯಲ್ಲಿ ಸಿಕ್ಕರು.

ಉತ್ಕಲವು ಸಣ್ಣ ಸಣ್ಣ ಜಮೀನುದಾರರ ಪ್ರಾಂತ. ಅವರಿಗೆಲ್ಲ ರಾಜರಿಗಿದ್ದಷ್ಟು ಅಧಿಕಾರವಿದೆ. ರಾಜರಿಗಿರಬೇಕಾದ ಪ್ರಜಾವಾತ್ಸಲ್ಯವಿಲ್ಲ. ರೈತರನ್ನು ಹಿಂಡಿ, ಗಾಣವಾಡಿ, ಹಿಪ್ಪೆ ಮಾಡಿದಾರೆ. ಆ ರೌರವ ನರಕದ ಬಗ್ಗೆ ಇತ್ತೀಚೆಗೆ ಧೇನಕನಾಲ್, ರಾಣಪುರ ಮುಂತಾದ ಜಮೀನುದಾರಿಗಳು ಸಾಕಷ್ಟು ಬೆಳಕು ಬೀರಿವೆ. ಅಸಹಕಾರದ ಚಳುವಳಿಯ ಸೆಕೆ ಬಡಿದು ಅಲ್ಲಿನ ರೈತರು ತಿರುಗಿಬಿದ್ದರು. ಕಾಣಿಕ ಎಂಬ ಜಮೀನುದಾರಿಯಲ್ಲಿ ಆ ಚಳುವಳಿಯನ್ನು ಅಣಗಿಸಲು ರಕ್ತ ಹಳ್ಳವಾಗಿ ಹರಿದು ಹೋಯಿತು. ಗೋಪಬಂದು ಮತ್ತು ಭಾಗೀರಥಿ ಮಹಾಪಾತ್ರರಿಬ್ಬರೂ ಸರಕಾರದ ಅತಿಥಿಗಳಾದರು. ಮೆಹತಾಬರೊಬ್ಬರೇ ಇಡೀ ಭಾರ ಹೊರಬೇಕಾಯಿತು.

ಮೆಹತಾಬರು ಬಡವರಾಗಿ ಹುಟ್ಟಿದರೂ ಜಮೀನುದಾರಿಗೊಂದಕ್ಕೆ ದತ್ತು ಹೋದರು. ಎರಡೂ ದಂಡೆಗಳನ್ನು ನೋಡಿದವರು. ಅಷ್ಟು ಭೀಷಣವಾಗಿ ಚಳುವಳಿಯನ್ನು ನಿಗ್ರಹಿಸಬೇಡಿರೆಂದು ಜಮೀನುದಾರರಿಗೆ ಹೇಳಿದರು. ಕೇಡಿಗೆ ಬುದ್ಧಿ ಹೇಳಿದವರುಂಟೇ ? ಮೆಹತಾಬರಿಗೆ ಒಂದು ವರ್ಷ ಸೆರೆಮನೆಯ ಬಹುಮಾನ ಸಿಕ್ಕಿತು. ಅಂದೇ ಉತ್ಕಲದ ಸಂಸ್ಥಾನ

ಗಳ ಸಮರದ ಬೀಜಾಂಕುರವಾಯಿತು. ಈಗ ಅದರ ಫಲ ಅನುಭವ ವಾಗುತ್ತಿದೆ.

ಮುಂದೆ ಗೋಪಬಂಧು ಕಣ್ಮರೆಯಾದ ಮೇಲೆ ಮೆಹತಾಬರು ಉತ್ಕಲದ ನಾಯಕರಾದರು. ರಚನಾತ್ಮಕ ಕಾರ್ಯಗಳಲ್ಲಿ ತೊಡಗಿದರು. ಉಪ್ಪಿನ ಸತ್ಯಾಗ್ರಹ ಬಂದಾಗ ಕಣ್ಣುಮುಚ್ಚಿ ಧುಮುಕಿದರು. ಗುಜರಾತಿನ ತರುವಾಯ ಉಪ್ಪಿನ ಸತ್ಯಾಗ್ರಹದ ಉತ್ಸಾಹ ವ್ಯವಸ್ಥೆಗಳಲ್ಲಿ ಉತ್ಕಲವು ಮೊದಲನೆಯದೆಂದು ಕಾಂಗ್ರೆಸ್ಸೇ ಹೇಳಿತು. ಅದು ಮುಗಿದ ಮೇಲೆ ಮತ್ತೆ ರಚನಾತ್ಮಕ ಕೆಲಸದಲ್ಲೇ ಹುದುಗಿಕೊಂಡರು ಮೆಹತಾಬ್. ಅವರು ಹೊರಗೆ ಬಂದದ್ದು ಚುನಾವಣೆಯ ಸಮಾರಂಭದಲ್ಲೇ. ತಮಗಾಗಿ ವೋಟು ಪಡೆಯಲಲ್ಲ, ಕಾಂಗ್ರೆಸ್ಸಿಗೆ ಮತ ಪಡೆಯಲು.

ಮೆಹತಾಬರಿಗಿನ್ನೂ ದೀರ್ಘವಾದ ಆಯುಷ್ಯವಿದೆ. ಆ ಆಯುಷ್ಯದಲ್ಲಿ ಸ್ವರಾಜ್ಯಗಳಿಸಿಬಿಟ್ಟೇನು, ಹೊಸ ಸಮಾಜದ ಸೃಷ್ಟಿಗೆ ನೆರವಾದೇನು ಎಂಬ ಆಸೆ, ಉತ್ಸಾಹ, ಭರವಸೆಗಳಿವೆ. ಆ ಮೋರೆಯಲ್ಲಿ ಅವು ಒಡೆದು ಕಾಣುತ್ತವೆ

* * * *

ಸಂಸ್ಥಾನಗಳ ಚಳುವಳಿಯಲ್ಲಿ ತೊಡಗಿಕೊಂಡವರಲ್ಲಿ ಮತ್ತೊಬ್ಬರ ದೇವ ಶಂಕರರಾಯರು. ಅವರು ಹುಟ್ಟಿದ್ದೂ ಒಂದು ಸಂಸ್ಥಾನದಲ್ಲಿ— ಭೋರ್‌ನಲ್ಲಿ, ಒಂದು ಬಡ ಕುಟುಂಬದಲ್ಲಿ.

ಎಲ್ಲ ಮಹಾರಾಷ್ಟ್ರರಂತೆ ಶಂಕರ ರಾಯರೂ ಟಿಳಕ, ಕೇಳಕರರ ಪ್ರಭಾವದಲ್ಲಿ ಬೆಳೆದರು. ೧೯೨೨-೨೩ ರಲ್ಲಿ ಕೇಳಕರರು ಮಹಾರಾಷ್ಟ್ರ ಪ್ರಾಂತೀಯ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾಗಿದ್ದಾಗ ಇವರು ಕಾರ್ಯದರ್ಶಿಗಳಾಗಿದ್ದರು. ಮುಂದೆ ಅಭಿಪ್ರಾಯಭೇದ, ಸಿದ್ಧಾಂತಭೇದಗಳ ಸಲುವಾಗಿ ಆ ಕ್ಷೇತ್ರವನ್ನು ಬಿಟ್ಟು ಖಾದೀ ಕೆಲಸದಲ್ಲಿ ಮುಳುಗಿದರು. ಗಾಂಧೀಜಿಯ ರಚನಾತ್ಮಕ ಕಾರ್ಯಕ್ರಮಕ್ಕೆ ತಮ್ಮ ಪ್ರಾಂತದಲ್ಲಿ ಒಂದು ಆಧಾರ ಸ್ತಂಭವಾದರು. ಇಂದಿಗೂ ಮಹಾರಾಷ್ಟ್ರದಲ್ಲಿ ಗಾಂಧೀ ವಾದಕ್ಕೆ ಇವರೇ ಮೇಲ್ಪಂಕ್ತಿ. ಇವರದೇ ಆ ದೀಪ.

೧೯೨೦ ರಲ್ಲಿ ಮಹಾರಾಷ್ಟ್ರದಲ್ಲಿ ಮುಲ್ಶೀಪೇಟ ಸತ್ಯಾಗ್ರಹವೊಂದು ಯಶಸ್ವಿಯಾಗಿ ನಡೆಯಿತು. ಟಾಟಾ ಕಂಪನಿಯ ಒಂದು ಯೋಜನೆಗೆ

ವಿರುದ್ಧವಾಗಿ ಹೂಡಿದ್ದ ಚಳುವಳಿ ಅದು. ಅದರಲ್ಲಿ ಶಂಕರ ರಾಯರು ಮೂರು ಸಲ ಸೆರೆಮನೆ ಕಂಡರು. ಅಲ್ಲಿ ಅವರು ತಾಳಿಕೊಂಡ ಬಾರು ಕೋಲಿನ ಪೆಟ್ಟು ಅವರ ಹೆಸರನ್ನು ರಕ್ತಾಕ್ಷರಗಳಲ್ಲಿ ಬರೆದವು. ಸೈಮನ್ ಕಮಿಷನ್ ಬಹಿಷ್ಕಾರ, ಉಪ್ಪಿನ ಸತ್ಯಾಗ್ರಹಗಳಲ್ಲೂ ಅವರಿಗೆ ದೀರ್ಘ ಶಿಕ್ಷೆಗಳಾದವು.

ಶಂಕರ ರಾಯರು ಸ್ವಲ್ಪ ಭಾವುಕ ಜೀವಿ. ಹೋಂ ರೂಲು ಚಳು ವಳಿಯಲ್ಲಿದ್ದರೂ ಚಂಪಾರಣ್ಯ ಸತ್ಯಾಗ್ರಹದ ಕರೆಗೆ ಕರಗಿ ಹೋದರು. ಗಾಂಧೀಜಿಯ ಸಂಬಂಧ ಇವರಿಗೆ ಅಂದೇ ಬಂತು. ಅಂದಿನಿಂದ ಇಂದಿನ ವರೆಗೆ ಆ ಮಾರ್ಗದಲ್ಲಿ ಅವರು ಅಚಲರಾಗಿದಾರೆ. ನಡುವೆ ಸೈಮನ್ ಕಮಿಷನನ ಗದ್ದಲವಾದಾಗ ಅವರಿಗೆ ೬ವರ್ಷ ಕಠಿಣ ಶಿಕ್ಷೆಯಾಯಿತು. ಸೆರೆಮನೆಯಲ್ಲಿ ರಾಯರು ಧಾರ್ಮಿಕ ಗ್ರಂಥಗಳನ್ನು, ಮುಖ್ಯವಾಗಿ ಗೀತೆ ಯನ್ನು, ಆಳವಾಗಿ ಅಭ್ಯಾಸ ಮಾಡಿಕೊಂಡು ಬಂದರು. ಮೊದಲಿನಿಂದಲೂ ಬ್ರಹ್ಮಚರ್ಯದ ಒಲವು. ಹೊರಗೆ ಬಂದಾಗ ಅವರ ಬಾಳು ಹೊಸ ಹಾದಿ ಹಿಡಿಯಿತು. ಅಂದಿನಿಂದ ಅವರು ರಾಜಕೀಯ ಕ್ಷೇತ್ರದಲ್ಲಿ ಸನ್ಯಾಸಿಗಳಂತೆ ವಿಹರಿಸುತ್ತಿದ್ದಾರೆ. ಒಮ್ಮೊಮ್ಮೆ ಅವರ ಗಡ್ಡ, ಅವರ ವೇಷ, ಎಲ್ಲಕ್ಕಿಂತ ಹೆಚ್ಚಾಗಿ ಅವರ ಭಾವಮುಗ್ನ ದೃಷ್ಟಿ, ರಾಮಕೃಷ್ಣ ಪರಮಹಂಸರನ್ನು ನೆನ ಪಿಗೆ ತರುತ್ತದೆ.

ರಾಯರು ಗಾಂಧೀ ಸೇವಾ ಸಂಘದ ಸದಸ್ಯರು. ವೃತ್ತಿ, ಪತ್ರಿಕಾ ನಿರ್ವಹಣ. ಮಹಾರಾಷ್ಟ್ರ ಕಾಂಗ್ರೆಸ್ಸಿನ ದಿನಪತ್ರಿಕೆಯಾದ ಲೋಕ ಶಕ್ತಿಗೆ ಇವರೇ ಸಂಪಾದಕರು. ಲಾ ಕಾಲೇಜಿನಲ್ಲಿರುವಾಗಲೇ ಚಳುವಳಿ ಯಲ್ಲಿ ಧುಮುಕಿದುದರಿಂದ ಪತ್ರಿಕಾ ನಿರ್ವಹಣವೇ ಬಹಳ ದಿನದಿಂದ ಇವರ ಕ್ಷೇತ್ರವಾಗಿದೆ.

ದೇವರ ಸರಳ ಜೀವನ ಅಚಲ ಶ್ರದ್ಧೆಗಳ ಮೆಚ್ಚು ಎಂದು ಮಹಾ ರಾಷ್ಟ್ರವು ಫೈಜಪುರದ ಕಾಂಗ್ರೆಸ್ಸಿಗೆ ಸ್ವಾಗತಾಧ್ಯಕ್ಷರನ್ನಾಗಿ ಆರಿಸಿತು.

\+ \+ \+ \+

ಸಂಸ್ಥಾನಗಳ ಪ್ರತಿನಿಧಿಗಳು ಪಟ್ಟಾಭಿಯೊಡನೆ ಮಾತನಾಡುತ್ತ ಕುಳಿ ತಿದ್ದೆವು. ರೈಲಿನಿಂದ ಆಗ ತಾನೇ ಯಾರೋ ಇಬ್ಬರು ಹೆಂಗಸರು ಬಂದರು

ಅತಿಥಿ ಭವನಕ್ಕೆ; ಮುಂದುಗಡೆಯ ಬಲಭಾಗದಲ್ಲಿ ಇರುವ ಕೋಣೆಗೆ ಹೋದರು. ಅದು ಕೃಪಲಾನಿಯ ಬಿಡದಿ. ಒಂದೆರಡು ಗಳಿಗೆಯಲ್ಲೇ ಕೃಪಲಾನಿ ಮಹಡಿಯಿಂದ ಇಳಿದು ಬಂದರು. ಅವರು ತಮ್ಮ ಕೋಣೆಗೆ ಹೋಗುತ್ತಿದ್ದುದು ನೋಡಿ ಪಟ್ಟಾಭಿ ಕೂಗಿದರು; 'ಒಳಗೆ ಯಾರೋ ಪರಿಚಯವಿಲ್ಲದವರಿದಾರೆ, ಹೋಗಬೇಡ.' ಕೃಪಲಾನಿ ಅಲ್ಲಿಂದಲೇ ಹೇಳಿದರು. 'ಯಾರಿಗೆ ಪರಿಚಯವಿಲ್ಲ? ನಿನಗೆ, ಡಾಕ್ಟರ್'. ಬಂದಿದ್ದವರು ಅವರ ಹೆಂಡತಿ, ಶ್ರೀಮತಿ ಸುಚೇತಾ.

ಕೃಪಲಾನಿ ವಿನೋದಿಗಳೆಂದು ಸುಲಭವಾಗಿ ತಿಳಿಯುವುದಿಲ್ಲ. ವಲ್ಲಭಭಾಯಿಗಿದ್ದಂತೆ ಇವರಿಗೆ ನಾಲಿಗೆ ಕೊಂಚ ಹರಿತ. ಹಿಂದು ಮುಂದು ನೋಡದೆ ಮಾತಾಡುತ್ತಾರೆಯೇನೋ ಎನಿಸುತ್ತದೆ. ಟೀಕೆ ಮಾಡಿದರೆ, ಯಾವುದನ್ನಾದರೂ ವಿಮರ್ಶೆ ಮಾಡಿದರೆ, ಅದು ಪಟ್ಟಾವರಸೆ. ದಯೆಯಿಲ್ಲ. ದಾಕ್ಷಿಣ್ಯವಿಲ್ಲ. ಎಷ್ಟೋಸಲ ಗಾಂಧೀಜಿಯನ್ನು ತೀವ್ರವಾಗಿ ಟೀಕಿಸಿದಾರೆ.

ಕೃಪಲಾನಿ ಸ್ವಭಾವತಃ ಧೀರರು. ನೇರಾದ ಹಾದಿಯವರು. ಕೊಂಕು ಕಪಟಗಳಾಗಲಿ, ಅಳ್ಳೆದೆಯಾಗಲಿ ಅವರಿಗೆ ಸೇರದು. ಅಂತೇ ಅವರ ಮಾತು ಕೆಲವು ಸಲ ಸಿಡಿಲಿನಂತಿರುತ್ತದೆ.

ನೋಡಲು ಹುಚ್ಚರಂತೆ ಇದ್ದರೂ ಕೃಪಲಾನಿ ದೊಡ್ಡ ವಿದ್ವಾಂಸರು. ಉಚ್ಚ ಶಿಕ್ಷಣ ಪಡೆದು ಪ್ರೊಫೆಸರರಾಗಿ ಕಾಲ ಕಳೆದವರು. ಜೀವನದಲ್ಲಿ ಇಳಿದು ಬಾರದ ಜ್ಞಾನ ಜ್ಞಾನವಲ್ಲವೆಂದು ನಂಬಿದ ವ್ಯವಹಾರ ವಾದಿ. ಕರ್ಮಜೀವನದಲ್ಲಿ ತೊಡಗಿದರೂ ಕೀರ್ತಿಯ ಗೋಪುರವನ್ನೇರುವ ಆಸೆಯಿಲ್ಲದ ವೇದಾಂತಿ. ಹೆಚ್ಚು ರಭಸಕ್ಕೆ ಹೋಗದೆ ತಮ್ಮ ಪಾಲಿಗೆ ಆರಿಸಿಕೊಂಡ ಕೆಲಸವನ್ನು ಪೂರ್ಣವಾಗಿ ಸಾಧಿಸುವುದರಲ್ಲಿ ತೊಡಗುತ್ತಾರೆ.

ಇವರು ಹುಟ್ಟಿದುದು ಸಿಂಧು ಪ್ರಾಂತದಲ್ಲಿ. ಕರ್ಮಪ್ರವಾಹದಲ್ಲಿ ತೇಲಿಕೊಂಡು ನಾಲ್ಕಾರು ಪ್ರಾಂತಗಳಲ್ಲಿ ತಮ್ಮ ಆಯುಷ್ಯ ಕಳೆದಿದಾರೆ. ಬಿಹಾರ ಪ್ರಾಂತದಲ್ಲಿ—ಮುಜಫರ್‌ಪುರದಲ್ಲಿ—ಕಾಲೇಜಿನ ಪ್ರಾಧ್ಯಾಪಕರಾಗಿದ್ದಾಗ ಇವರಿಗೆ ಗಾಂಧೀಜಿಯ ಪ್ರಥಮ ದರ್ಶನನಾಯಿತು. ಅದನ್ನು ಅವರೇ ಈಚೆಗೆ ವರ್ಣಿಸಿದಾರೆ. ಹಿಂದುಸ್ಥಾನಕ್ಕೆ ಗಾಂಧೀಜೀ ಬಂದಾಗ

ಶಾಂತಿನಿಕೇತದ ವರೆಗೆ ಹೋಗಿ ಅವರನ್ನು ನೋಡಿ ಬಂದರು. ಅಂದಿನಿಂದ ಅವರಲ್ಲಿ ದೃಢವಾದ ಗೌರವ, ಶ್ರದ್ಧೆ ಉಂಟಾದವು. ಹರೆಯದಲ್ಲಿ ಕೃಪಲಾನಿ ಕ್ರಾಂತಿವಾದಿ, ಹಿಂಸಾವಾದಿ. ಗಾಂಧೀ ಸಂದರ್ಶನ ಅದನ್ನು ಅಹಿಂಸೆಗೆ ಪೂರಾ ತಿರುಗಿಸಿಬಿಟ್ಟಿತು. ಮುಂದೆ ಗಾಂಧೀವಾದವನ್ನು ಇವರಷ್ಟು ವಿಶದವಾಗಿ, ಸ್ಪಷ್ಟವಾಗಿ ವಿವರಿಸುವವರೇ ಇಲ್ಲದಾಯಿತು. ಅಹಿಂಸೆಯ ತಳಹದಿಯ ಮೇಲೆ ನಿಂತ ಗಾಂಧೀವಾದವು ಹೇಗೆ ದೇಶದ ರೈತರ ಕೂಲಿಕಾರರ ಸಮಸ್ಯೆಯನ್ನು ಬಿಡಿಸುತ್ತದೆಂಬುದನ್ನೂ, ಸಾಮ್ಯವಾದ, ಮಾರ್ಕ್ಸ್‌ವಾದ, ಕಮ್ಯುನಿಸಂ ಮುಂತಾದ ಪಂಥಗಳಿಗಿಂತ ಹೇಗೆ ಉತ್ತಮವೆಂಬುದನ್ನೂ, ಮುಖ್ಯವಾಗಿ ಜಗತ್ಕಲ್ಯಾಣಕ್ಕೆ ಹೇಗೆ ದೋಹದಕಾರಿಯೆಂಬುದನ್ನೂ ಆಗಾಗ ಲೇಖನಗಳ ಮೂಲಕ ತೋರಿಸುತ್ತಿದಾರೆ.

ಚಂಪಾರಣ್ಯದಲ್ಲಿ ಗಾಂಧೀಜೀ ಸತ್ಯಾಗ್ರಹ ಮೊದಲು ಮಾಡಿದಾಗ ಚಾತಪಕ್ಷಿಗೆ ಮಳೆ ಹನಿ ಉದುರಿದಂತಾಯಿತು ಕೃಪಲಾನಿಗೆ. ಗಾಂಧೀಜಿಗೆ ನೆರವಾಗಿ ನಿಂತು ಆ ಸತ್ಯಾಗ್ರಹವನ್ನು ನಡೆಸಿದರು. ಅಲ್ಲೇ ಇವರಿಗೆ ಸತ್ಯಾಗ್ರಹದ ಕಲೆಯ ಅನುಭವವಾಯಿತು.

ಮುಂದೆ ಕೆಲವುಕಾಲ ಕಾಶಿಯಲ್ಲಿ ಮದನಮೋಹನ ಮಾಲವೀಯರ ಕಾರ್ಯದರ್ಶಿಗಳಾಗಿ ಕೆಲಸ ಮಾಡಿದರು. ೧೯೧೮ರ ದಿನಗಳು ಅವು. ಹಿಂದುಸ್ಥಾನದಲ್ಲಿ ರಾಜಕೀಯ ಬಿಕ್ಕಟ್ಟು ಬೆಳೆದಿತ್ತು. ಮಾಂಟೆಗೂ ಚೆಲ್‌ಮ್ಸ್‌ಫೋರ್ಡರ ವರದಿ ಬಂದಿತ್ತು. ಆ ಸಂದರ್ಭದಲ್ಲಿ ಪಂಡಿತ ಮಾಲವೀಯರೇ ಕಾಂಗ್ರೆಸ್ಸಿಗೆ ಅಧ್ಯಕ್ಷರಾದರು. ಕೃಪಲಾನಿಗೆ ಕಾಂಗ್ರೆಸ್ಸಿನ ಪರಿಚಯವಾದುದು, ಭಾರತದ ಬೇರೆ ಬೇರೆ ನಾಯಕರ ಗುರುತಾದುದು ಆಗಲೇ.

ಆ ಮೇಲೆ ಹಿಂದೂ ವಿಶ್ವವಿದ್ಯಾನಿಲಯದಲ್ಲಿ ರಾಜನೀತಿ ಶಾಸ್ತ್ರದ ಅಧ್ಯಾಪಕರಾಗಿದ್ದರು. ಗುಜರಾತಿನಲ್ಲಿ ಗಾಂಧೀಜೀ ಗುಜರಾತು ವಿದ್ಯಾಪೀಠವನ್ನು ಪ್ರಾರಂಭಿಸಿದಾಗ ಅಲ್ಲಿಗೆ ಹೋದರು. ಐದು ವರ್ಷಕಾಲ ರಾಷ್ಟ್ರೀಯ ಕಾರ್ಯಕರ್ತರನ್ನು ಅಲ್ಲಿ ತಯಾರು ಮಾಡಿ, ಆಮೇಲೆ ಮೀರತ್ತಿನಲ್ಲಿ ಗಾಂಧೀ ಆಶ್ರಮವನ್ನು ಪ್ರಾರಂಭಿಸಿ ಖಾದೀ ಕಾರ್ಯದಲ್ಲಿ ತೊಡಗಿದರು.

ಮುಂದೆ ಕಾಂಗ್ರೆಸ್ಸಿನ ಕಾರ್ಯದರ್ಶಿಯಾದರು. ೧೯೩೪ರಿಂದ ಇಂದಿಗೂ ಆ ಸ್ಥಾನದಲ್ಲೇ ಇದಾರೆ.

ಕೃಪಲಾನಿಗೆ ಬಡತನವು ದೊಡ್ಡದೊಂದು ವ್ರತ. ಕಾರ್ಯದರ್ಶಿಯಾಗಿ ೭೫ ರೂಪಾಯಿ ಸಂಬಳ ಸಿಕ್ಕರೂ ಬರೀ ೮ ರೂ. ಮಾತ್ರವೇ ತೆಗಿದುಕೊಳ್ಳು ತ್ತಿದ್ದರಂತೆ ಮದುವೆಯಾಗುವವರೆಗೂ. ೪೦–೪೫ ವರ್ಷ ಬ್ರಹ್ಮಚಾರಿಗಳಾ ಗಿದ್ದು ಈಗ ಮದುವೆ ಮಾಡಿಕೊಂಡಿದಾರೆ. ಈ ಬೈರಾಗಿಗೆ ಮದುವೆಯಾ ದರೂ ಏಕೆ ಬೇಕಾಯಿತೆಂದು ಆಶ್ಚರ್ಯ ಪಡದವರು ಇಲ್ಲ. ಆ ಗುಟ್ಟು ಶ್ರೀಮತಿ ಸುಚೇತಾದೇವಿಗೆ ಮಾತ್ರ ಗೊತ್ತು.

ಇವರನ್ನು ಆಚಾರ್ಯ ಕೃಪಲಾನಿಯೆಂದು ಕರೆಯುತ್ತಾರೆ. ಆಚಾರ್ಯ ಶಬ್ದಕ್ಕೆ ಇವರು ನಿಜವಾಗಿಯೂ ತಕ್ಕವರು. ಆ ಹಿಂದಿನ ಕಾಲದ ತಪಸ್ವಿ ಗಳ ಎಲ್ಲ ತೇಜಸ್ಸೂ ಇವರಿಗಿದೆ.



# ಸೇವಾಗ್ರಾಮ

ನಾಲ್ಕೇ ನಾಲ್ಕು ಗುಡಿಸಲು. ಒಂದು ಭಾವಿ. ಮಗ್ಗುಲಲ್ಲಿ ಸಣ್ಣ ದೊಂದು ತೋಟ. ಪಚ್ಚಗೆ ಕಾಣುವ ನಾಲ್ಕೆಂಟು ಎಕರೆ ಪೈರು. ಗುಡಿಸಲ ಮುಂದಿನ ದೊಡ್ಡ ಬೋಳು ಅಂಗಳ. ಹುಲ್ಲು ಕೂಡಾ ಕೆತ್ತಿಲ್ಲ. ಅದರಲ್ಲೇ ದನಗಳಿಗೆ ಮೇವಿನ ಬಣವೆ.

ಇದೇ ಸೇವಾಗ್ರಾಮ ಆಶ್ರಮ. ಗಾಂಧೀಜಿಯ 'ವೈಸರಾಯ್ ಭವನ,' ನಿಜ. ಸೇವಾಗ್ರಾಮ ರಾಷ್ಟ್ರೀಯ ಹಿಂದುಸ್ಥಾನದ ನವದೆಹಲಿ ಯಾದಾಗ ಇದೇ ತಾನೆ ಅರಮನೆ!

ದೆಹಲಿ, ಹೈದರಾಬಾದು, ಮೈಸೂರು ಮುಂತಾದವನ್ನು ನೋಡಿ. ಒಗ್ಗಿ ಹೋದ ಮನಸಿಗೆ ಈ ಗಾಂಧೀ ಗುಡಿಸಲೇಯೆ ಹಿಂದೂಸ್ಥಾನದ ಅರಮನೆ ಅನಿಸುತ್ತದೆ. ವೈಸರಾಯ್ ರಾಜಪ್ರತಿನಿಧಿ; ಗಾಂಧೀಜೀ ಹಿಂದು ಸ್ಥಾನದ ಪ್ರಜಾ ಪ್ರತಿನಿಧಿ. ಅದರಲ್ಲೂ ಬಡಬಗ್ಗರ ಪ್ರತಿನಿಧಿ. ಇದೇ ಅದರ ಉತ್ತರವೆಂದು ತಿಳಿದುಕೊಂಡಿದೇನೆ.

ನಾಲ್ಕೂ ಕಡೆಯಿಂದ ಜನ ಸೇವಾಗ್ರಾಮವನ್ನು ನೋಡಬರುತ್ತಾರೆ. ಅದರಲ್ಲಿ ಅಗಸರ ಗೋತ್ರದ ನಾಗರಿಕರೂ ಚರಖಾಕುಲದ ಗೌಡರೂ ಎಲ್ಲಾ ತರದ ಜನರೂ ಬರುತ್ತಾರೆ. ಬಂದವರಿಗೆ ಕೂತುಕೊಳ್ಳಲು ಗುಡಿಸಲಿನ ಪಡಸಾಲೆಯಲ್ಲಿ ಈಚಲ ಚಾಪೆ ಹಾಕಿರುತ್ತದೆ. ಸ್ವಚ್ಛವಾಗಿ ಸಾರಿಸಿದ ನೆಲ ಕಡಪಾ ಕಲ್ಲು ಹಾಸಿದ್ದಲ್ಲ. ಷರಾಯಿ ಜನರಿಗೆ ಅದೊಂದು ಮಹಾ ತಪಸ್ಸೇ ಸರಿ. ಯಾರಾದರೂ ಪರದೇಶದವರು ಬಂದರೆ ಅಲ್ಲೇ ಇದಿರಿಗಿದ್ದ ಪೆಟ್ಟಿಗೆ ಯನ್ನೋ ಡಬ್ಬಾವನ್ನೋ ತೋರಿಸಿ ಇದೇ ನಮ್ಮ ಸ್ಟೂಲು ಎಂದು ಹೇಳಿ ನಕ್ಕು ನಗಿಸಿ ಅದರ ಮೇಲೆ ಕೂಡಿಸಿ ಅವರ ಕಷ್ಟವನ್ನು ನೀಗುತ್ತಾರೆ.

ಸೇವಾಗ್ರಾಮ ಆಶ್ರಮದಲ್ಲಿ ಇರುವುದು ನಾಲ್ಕೇ ಗುಡಿಸಲು. ಒಂದು ಗಾಂಧೀಜಿಯದು. ಒಂದರಲ್ಲಿ ಕಸ್ತೂರಿ ಬಾ. ಗುಜರಾತಿಯಲ್ಲಿ ಮಾ ಎನ್ನುವುದು ಬಾ ಆಗುತ್ತದೆ. ಇನ್ನೊಂದು ಇತರ ಆಶ್ರಮವಾಸಿಗಳ

ಉಪಯೋಗಕ್ಕಾಗಿ. ನಾಲ್ಕನೆಯದು ಕೆಲವು ವೇಳೆ ಆಸ್ಪತ್ರೆ, ಒಮ್ಮೊಮ್ಮೆ ಅತಿಥಿ ಭವನ. ಆಶ್ರಮದ ಜನ ಬೇನೆಬಿದ್ದರೆ ಅದು ಆಸ್ಪತ್ರೆ. ಇಲ್ಲದಿದ್ದರೆ ಅತಿಥಿ ಭವನ.

ಇದಿರಿನಲ್ಲೇ ಆಶ್ರಮದ ಗೋಶಾಲೆ. ಮೊದಲು ಇದು ಚಿಕ್ಕದಾಗಿತ್ತು. ಈಚೆಗೆ ಬೆಳೆಸಿದಾರೆ. ಈಗ ದನಗಳೂ ಹೆಚ್ಚಾಗಿವೆ. ಹಸೀ ಹಾಲಿನಿಂದಲೇ ಕೆನೆ ತೆಗೆವ ವಿಲಾಯತಿ ಸಂಪ್ರದಾಯ ಇಲ್ಲಿ ರೂಢಿಗೆ ಬಂದಿದೆ. ನಮ್ಮ ಹಾಗೆ ಹಾಲು ಕಾಯಿಸಿ ಕೆನೆ ಮಾಡುವುದಿಲ್ಲ ವಿಲಾಯತಿಯ ಜನ; ಹಸೀ ಹಾಲಿನಿಂದ ಕೆನೆ ತೆಗೆದು ಅದರಿಂದ ಬೆಣ್ಣೆಯಂಥದನ್ನು ಮಾಡುತ್ತಾರೆ. ಇದಕ್ಕಾಗಿ ಒಂದು ಬಗೆಯ ಯಂತ್ರವನ್ನು ಬಳಸಬೇಕಾಗುತ್ತದೆ. ಗೋಶಾಲೆಯಲ್ಲಿ ಒಂದು ಕಡೆ ಆ ಯಂತ್ರ ಕಂಡು ಬರುತ್ತದೆ. ಗಾಂಧೀಜೀ ಮೇಕೆಯ ಹಾಲು ಕುಡಿಯುತ್ತಾರೆ: ಎಮ್ಮೆ ಹಸುಗಳ ಹಾಲನ್ನು ಅವರು ಕುಡಿಯರು. ಗೋಶಾಲೆಯಲ್ಲಿ ಈ ಮೇಕೆಯ ವಿಭಾಗವೂ ಇದೆ.

ಎಮ್ಮೆಯ ಮಾತೇ ಗಾಂಧೀಜಿಗೆ ಸೇರದು. ಅವರ ಗೋಸಂರಕ್ಷಣೆಯ ಚಳುವಳಿಯಲ್ಲಿ ಎಮ್ಮೆಯ ಬಹಿಷ್ಕಾರವೂ ಒಂದು ಮುಖ್ಯ ಕರ್ತವ್ಯ. ಎಮ್ಮೆಯ ರೂಢಿ ಬೆಳೆದಂತೆ ಹಸುವಿನ ಕಡೆ ಜನರ ತಾತ್ಸಾರ ಹೆಚ್ಚಾಯಿತು. ಎಮ್ಮೆ ಹಾಲು ಹೆಚ್ಚು ಕೊಡುತ್ತದೆ ಎಂಬ ಮೋಹಕ್ಕೆ ಜನ ಬಿದ್ದರು. ಬೇಸಾಯಕ್ಕೆ ಅದರಿಂದ ದೇಶದಲ್ಲಿ ಸಾಮಾನ್ಯವಾಗಿ ಏನೂ ಉಪಯೋಗವಾಗದಿದ್ದರೂ ಹಾಲು ಮೊಸರು ತುಪ್ಪಗಳಿಗಾಗಿ ಅದನ್ನು ಸಾಕಲು ಮೊದಲಾದ ಮೇಲೆ, ಎರಡನ್ನೂ ಸಾಕುವುದು ಕಷ್ಟವಾಗಿ ಜನ ಹಸುವನ್ನು ಮನೆಯಿಂದ ಅಟ್ಟಿಬಿಟ್ಟರು. ಈಗಂತೂ ಹಳ್ಳಿಗಳಲ್ಲಿ ಹಸುವಿಲ್ಲದ ಮನೆ ಎಷ್ಟೋ ಇವೆ. ಎಮ್ಮೆಯಿಲ್ಲದ ಮನೆ ಅಪರೂಪ.

ಮೊದಲು ಗಾಂಧೀಜೀ ಕೇವಲ ಹಸುವಿನಹಾಲು, ಬೆಣ್ಣೆ, ತುಪ್ಪಗಳನ್ನು ಬಳಸುವ ವ್ರತ ಹಿಡಿದರು. ಈಗಲೂ ಅವರ ಅನುಯಾಯಿಗಳಲ್ಲಿ ಅನೇಕರು ಆ ವ್ರತವನ್ನು ಪಾಲಿಸುತ್ತಿದಾರೆ. ಕೆಲವು ವರ್ಷಗಳ ಹಿಂದೆ ಕಲ್ಕತ್ತೆಗೆ ಗಾಂಧೀಜೀ ಹೋಗಿದ್ದಾಗ ಅಲ್ಲಿ ಗೌಳಿಗರು ಹಾಲಿನ ಆಸೆಗಾಗಿ ಹಸುಗಳಿಗೆ ಕೊಡುತ್ತಿದ್ದ ಬಾಧೆಯನ್ನು ಕಣ್ಣಾರೆ ಕಂಡರು. ಅವರ ಮನ ಬೆಣ್ಣೆಯಂತೆ ಮಿದು. ಕೂಡಲೇ ಹಸುವಿನ ಹಾಲು ಬೆಣ್ಣೆ ಬಿಟ್ಟು ಬಿಟ್ಟರು,

೧೯೩೧ರಲ್ಲಿ ಗಾಂಧೀಜೀ ದುಂಡುಮೇಜಿನ ಪರಿಷತ್ತಿಗಾಗಿ ಲಂಡನ್ನಿಗೆ ಹೋದಾಗ ಅಲ್ಲಿಯೂ ಮೇಕೆ ಹಾಲಿನ ವ್ರತವನ್ನು ಬಿಡಲಿಲ್ಲ. ಉತ್ತಮ ವಾದ ೨ ಮೇಕೆ ಅವರಿಗಾಗಿ ಏರ್ಪಾಡಾಗಿದ್ದವು. ಪತ್ರಿಕೆಗಳಿಗೆ ಅದೊಂದು ವಿನೋದ ಸಾಮಗ್ರಿಯಾಗಿತ್ತು.

ಆಶ್ರಮ ಮೊದಲಾದಾಗ ಒಂದೇ ಗುಡಿಸಲಿತ್ತು. ಅದರಲ್ಲೇ ಒಂದು ಮೂಲೆಯಲ್ಲಿ ಗಾಂಧೀಜೀ, ಇನ್ನೊಂದರಲ್ಲಿ ಕಸ್ತೂರಿ ಬಾ, ಮೂರನೆಯದ ರಲ್ಲಿ ಮೀರಾಬಾಯಿ, ಕೊನೆಯದರಲ್ಲಿ ಪ್ಯಾರೆಲಾಲ್. ಯಾರಾದರೂ ನೋಡಲು ಬಂದರೆ ಅಷ್ಟರಲ್ಲೇ ಸರಿಹೊಂದಿಸಿಕೊಳ್ಳಬೇಕಾಗುತ್ತಿತ್ತು. ಈಗ ನಾಲ್ಕಾಗಿವೆ ಗುಡಿಸಿಲು.

ಇವಲ್ಲದೆ ಒಂದು ಅಡಿಗೆಯ ಮನೆ, ಬಚ್ಚಲು ಮನೆ ಇವೆ. ಗಾಂಧೀಜಿ ಗಾಗಿಯೇ ಸಣ್ಣದೊಂದು ಬಚ್ಚಲು ಮನೆ ಇದೆ. ಅಡಿಗೆ ಮನೆಯ ಕೆಲಸ ಆಶ್ರಮವಾಸಿಗಳಿಗೆಲ್ಲರಿಗೂ ಸೇರಿದುದಾದರೂ ಕಸ್ತೂರಿ ಬಾ ಅದರ ಯಜ ಮಾನಿ. ಈ ಎಪ್ಪತ್ತು ವರ್ಷದ ಮುದಿತನದಲ್ಲೂ ಆಕೆ ಹರೆಯದವರಂತೆ ಚಟುವಟಿಕೆಯಾಗಿ ಓಡಾಡುತ್ತಾರೆ. ಎಲ್ಲವನ್ನೂ ನೋಡಿಕೊಳ್ಳು ತ್ತಾರೆ.

ಕುಡಿಯುವ ನೀರಿಗೂ, ತೋಟಕ್ಕಾಗಿಯೂ ಒಂದು ಭಾವಿ ಇದೆ. ಕಪಿಲೆಯ ಮೂಲಕ ನೀರನ್ನು ಎತ್ತುತ್ತಾರೆ. ನಾನು ನೋಡಿದಾಗ ಮಗ್ಗ ಲಿನ ಹೊಲದಲ್ಲಿ ಕಬ್ಬಿನ ಗದ್ದೆಯಿತ್ತು. ಈ ಭಾವಿಯ ನೀರೇ ಅದಕ್ಕೂ. ಭಾವಿಯ ಮಗ್ಗುಲಲ್ಲೇ ತೋಟ. ಅದರಲ್ಲಿ ಫಲವೃಕ್ಷಗಳಿವೆ. ಬೇರೆ ಬೇರೆ ಜಾತಿಯ ಗಿಡಗಳನ್ನು ತರಿಸಿ ನೆಡಿಸಿದಾರೆ.

ಹತ್ತಿರದಲ್ಲೇ ಆಶ್ರಮದ "ಉದ್ಯೋಗ ಕುಟಿ"; ವರ್ಕ್‌ಷಾಪ್. ಅಲ್ಲಿ ಸೇವಾಗ್ರಾಮದ ಜನ ನೂಲುವುದು, ನೇಯುವುದು ಮೊದಲಾದ ಖಾದೀ ಕೆಲಸ ಮಾಡುತ್ತಾರೆ. ಆಶ್ರಮದಿಂದ ಅವರಿಗೆ ಕೂಲಿಯೂ ಸಿಗುತ್ತದೆ. ಮೊದಮೊದಲು ಸೇವಾಗ್ರಾಮದ ಜನ ಆಶ್ರಮಕ್ಕೆ ಬರುತ್ತಲೇ ಇರಲಿಲ್ಲ. ಗಾಂಧೀಜಿಯ ಹರಿಜನೋದ್ಯಮವೊಂದಿದೆಯಲ್ಲ! ಅದರಿಂದ ಆ ಜನ ದೂರವಾಗಿದ್ದುಬಿಟ್ಟರು. ಬರಬರುತ್ತ ಆ ಬಹಿಷ್ಕಾರ ಹೋಯಿತು. ಈಗ ಹಳ್ಳಿಯವರಿಗೆ ಆಶ್ರಮವೆಂದರೆ ಅಕ್ಕರೆ. ದುಡಿತವಂತೂ ಸರಿ.

ಆಟಪಾಟಗಳಿಗೂ ಮಕ್ಕಳು ಅಲ್ಲಿಗೆ ಬರುತ್ತವೆ. ಬೇನೆಬೇಸರಿಕೆಗೆ ಇಲ್ಲಿನ ಔಷಧವೇ ನಡೆಯುತ್ತದೆ.

ಮಕ್ಕಳು ಆಶ್ರಮಕ್ಕೆ ಬರಲು ಮತ್ತೊಂದು ಕಾರಣವಾಯಿತು. ಆಶ್ರಮದ ಪಕ್ಕದಲ್ಲೇ ಹಿಂದುಸ್ಥಾನೀ ತಾಲೀಮೀ ಸಂಘದ ಕಾರ್ಯಾಲಯವನ್ನು ಹೋದ ವರ್ಷ ಕಟ್ಟಿದರು. ವರ್ಧಾ ಶಿಕ್ಷಣವೆಂಬ ಹೆಸರಿನಿಂದ ಪ್ರಸಿದ್ಧವಾಗಿರುವ ಗಾಂಧೀ ವಿದ್ಯಾ ವಿಧಾನದ ಕೇಂದ್ರ ಅದು. ಸಂಘದ ಕಾರ್ಯದರ್ಶಿ ಶ್ರೀ. ಆರ್ಯನಾಯಕಂ ಮತ್ತು ಸಹಕಾರ್ಯದರ್ಶಿ ಶ್ರೀಮತಿ ಆಶಾದೇವಿ ಇಬ್ಬರೂ ಅಲ್ಲಿರುತ್ತಾರೆ. ಒಂದು ಚಿಕ್ಕ ಪ್ರಯೋಗ ಶಾಲೆಯೂ ಇದೆ. ಊರಿನ ಮಕ್ಕಳು ಅಲ್ಲಿ ಬಂದು ಆ ಪ್ರಯೋಗದಲ್ಲಿ ನೆರವಾಗುತ್ತವೆ. ಆಟಪಾಟಗಳಿಗೂ ಅಲ್ಲಿ ಅನುಕೂಲ ಮಾಡಲಾಗಿದೆ. ಸಂಜೆಯ ಹೊತ್ತು ಮಕ್ಕಳೊಡನೆ ಆಶಾದೇವಿ ಆಡುತ್ತಿರುವುದನ್ನು ನೋಡಬಹುದು.

ಆಶಾದೇವಿ ಮೊದಲು ಹಿಂದೂ ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕ ಕೆಲಸದಲ್ಲಿದ್ದವರು. ಅಲ್ಲಿಂದ ಶಾಂತಿನಿಕೇತನಕ್ಕೆ ಹೋದರು. ಅಲ್ಲಿ ಆರ್ಯನಾಯಕಂರ ಪರಿಚಯವಾಯಿತು. ಆರ್ಯನಾಯಕಂ ಸಿಂಹಳದವರು. ಜಾತಿಯಲ್ಲಿ ಕ್ರಿಶ್ಚಿಯನರು. ಮೊದಲ ಹೆಸರು ವಿಲಿಯಮ್ಸ್, ಮುಂದೆ ಇವರಿಬ್ಬರಿಗೂ ಮದುವೆಯಾಯಿತು. ಇಬ್ಬರೂ ಗಾಂಧೀಜಿಯ ವಿದ್ಯಾ ವಿಧಾನಕ್ಕೆ ಮನಸೋತವರು. ವರ್ಧಾದಲ್ಲಿ, ಅವರ ನೇತೃತ್ವದಲ್ಲಿ ನಡೆಯುತ್ತಿದ್ದ ಮಾರವಾಡೀ ವಿದ್ಯಾಲಯ, ಮಹಿಲಾಶ್ರಮಗಳಲ್ಲಿ ಕೆಲಸಮಾಡಲು ಬಂದರು. ಸ್ವಲ್ಪಕಾಲದಲ್ಲೇ ರಾಷ್ಟ್ರೀಯ ಶಿಕ್ಷಣವೇತ್ತರ ಸಭೆಯೊಂದು ವರ್ಧಾದಲ್ಲಿ ನಡೆಯಿತು. ಅದಕ್ಕೆ ಗಾಂಧೀಜಿಯೇ ಅಧ್ಯಕ್ಷರಾಗಿದ್ದರು. ಆ ಸಭೆಯಲ್ಲಿ ಹೊಸ ಶಿಕ್ಷಣ ಪದ್ಧತಿಯ ಯೋಜನೆಯೊಂದನ್ನು ಸಿದ್ಧಗೊಳಿಸಲು ಒಂದು ಸಮಿತಿ ನಿರ್ಮಿತವಾಯಿತು. ಆಗಿನಿಂದ ಆ ಸಮಿತಿಗೂ, ಮುಂದೆ ಅದರ ಸಂಘಕ್ಕೂ ಆರ್ಯನಾಯಕಂ, ಆಶಾದೇವಿ ಇಬ್ಬರೂ ಆಧಾರವಾಗಿದ್ದಾರೆ.

ಗಾಂಧೀಜೀ ಆಶ್ರಮವನ್ನು ಸೇರಿದಾಗ ತಮ್ಮನ್ನು ಕಾಣಲು ಬರುವವರು ಕಾಲುನಡಿಗೆಯಿಂದಲೇ ಬರಬೇಕೇ ವಿನಾ ವಾಹನಾರೂಢರಾಗಿ ಬರ

ಬಾರದು ಎಂದು ನಿಯಮ ಮಾಡಿದ್ದರಂತೆ. ಕಾರ್ಯಕರ್ತರೆಲ್ಲ ನಡೆದೇ ಹೋಗುತ್ತಿದ್ದರು. ಈಚೆಗೆ ಆ ನಿಯಮ ಹೋಗಿದೆ. ಕಾಂಗ್ರೆಸ್ಸು ಮಂತ್ರಿಪದವಿಗಳನ್ನು ಸ್ವೀಕರಿಸಿದ ಮೇಲೆ ಜನರ ಓಡಾಟ ಹೆಚ್ಚಾಗಿದೆ. ಎಲ್ಲಾ ಮೂಲೆಗಳಿಂದ ಅಧಿಕಾರಿಗಳು ಬಂದು ಹೋಗುತ್ತಾರೆ ಮಂತ್ರಿಗಳ ಓಡಾಟವೂ ಹೆಚ್ಚು. ವರ್ಧಾದಲ್ಲೇ ವರ್ಕಿಂಗ್ ಕಮಿಟಿ ನೆರೆಯುವುದು ಮೊದಲಾಯಿತು. ಹೀಗಾಗಿ ಟಾಂಗಾ ಮೋಟಾರುಗಳ ಓಡಾಟ ಬಹಳವಾಗಿದೆ. ಕೆಲವು ವೇಳೆ ಹತ್ತಾರು ಮೋಟಾರು ಒಂದೇ ದಿನ ಓಡಾಡುತ್ತವೆ. ಈ ಗಡಿಬಿಡಿ, ಈ ಆತುರದಿಂದ ತಪ್ಪಿಸಿಕೊಳ್ಳಲು ಗಾಂಧೀಜೀ ಬಹಳ ಪ್ರಯತ್ನ ಮಾಡುತ್ತಾರೆ. ಫಲವೇನೂ ಆಗಿಲ್ಲ.

ಬಂದು ಹೋಗುವ ಈ ಜನರನ್ನು ಕಾಣುವುದು, ಅವರೊಡನೆ ಮಾತುಕತೆಯಾಡುವುದು ಗಾಂಧೀಜಿಯ ನಿತ್ಯಜೀವನದ ಒಂದು ಮುಖ್ಯ ಭಾಗ. ಸಾಧಾರಣವಾಗಿ ಮಧ್ಯಾಹ್ನವೆಲ್ಲ ಇದರಲ್ಲೇ ಕಳೆಯುತ್ತದೆ. ೧ ಘಂಟೆಯಿಂದ ೫ರ ವರೆಗೆ ಈ ಸಂದರ್ಶನ–ಸಂಭಾಷಣೆಗಳ ಗೊಂದಲವೇ ಗೊಂದಲ. ಅವರಲ್ಲಿ ನಾನಾಪ್ರಕಾರದವರುಂಟು. ಮಂತ್ರಿಗಳು ಮಂತ್ರಾಂಗ ಆಲೋಚನೆಗಾಗಿ ಬಂದರೆ; ಅವರ ಶಾಸನ ಸಭೆಯ ಸದಸ್ಯರು ಅವರ ಮೇಲೆ ದೂರು ಹೇಳಲು ಬರುತ್ತಾರೆ. ಗಾಂಧೀ ಸೇವಾ ಸಂಘದ ಸದಸ್ಯರು ತಮ್ಮ ಸುಖ ದುಃಖಗಳನ್ನು ಹೇಳಲು ಬರುತ್ತಾರೆ. ಗಾಂಧೀ ತತ್ವಗಳು ತಮಗೆ ಸೇರುವುದಿಲ್ಲೆಂದೂ ಅದರ ಬಗ್ಗೆ ಚರ್ಚಿಸಬೇಕೆಂದೂ ಸಮತಾವಾದಿಗಳು, ವರ್ಧಾ ಶಿಕ್ಷಣದ ಬಗ್ಗೆ ಸಂದೇಹ ನಿವಾರಣೆಗಾಗಿ ಬೇರೆ ಬೇರೆ ಪ್ರಾಂತಗಳ ವಿದ್ಯಾಶಾಖಾಧಿಕಾರಿಗಳು, ಖಾದೀ ಗ್ರಾಮೋದ್ಯೋಗಗಳ ಪ್ರಚಾರದಲ್ಲಿ ದೊರೆಯುವ ಅನುಭವವನ್ನು ತಿಳಿಸಲು ಕೆಲಸಗಾರರು ಬರುತ್ತಾರೆ. ಸಂಸ್ಥಾನಗಳಲ್ಲಿ ಸತ್ಯಾಗ್ರಹ ಚಳುವಳಿ ಮೊದಲಾದ ಮೇಲಂತೂ ಎಲ್ಲಾ ಕಡೆಗಳಿಂದ ನಿತ್ಯವೂ ಜನ ಸಲಹೆ–ಬುದ್ಧಿವಾದಗಳಿಗಾಗಿ ಬರುತ್ತಾರೆ. ಇಲ್ಲಿಗೇ ಮುಗಿಯುವುದಿಲ್ಲ ಈ ಹೊಳೆ. ವೈಯಕ್ತಿಕ ಜೀವನದ ಬಗ್ಗೆ ಚರ್ಚಿಸಲೂ ಬರುವವರುಂಟು. ತಮ್ಮ ಜೀವನದಲ್ಲಿ ಸಣ್ಣ ಪುಟ್ಟ ಮಾತುಗಳನ್ನು ಗಾಂಧೀಜಿಗೆ ತಿಳಿಸಿ ಅದರ ಅಪ್ಪಣೆಯಂತೆ ನಡೆದುಕೊಳ್ಳಬೇಕೆಂಬ ಜನರದೊಂದು ದೊಡ್ಡ ಗುಂಪೇ ಇದೆ. ಅವರ ಮನೆಗಳಲ್ಲಿ ಮದುವೆಯಾಗಬೇಕಾದರೆ ಇವರ ಒಪ್ಪಿಗೆ

ಬೇಕು. ಅವರ ಸಂಸಾರಗಳಲ್ಲಿ ಏನಾದರೂ ಹೆಚ್ಚು ಕಡಿಮೆಯಾದರೆ ಇವರಿಗೆ ಗೊತ್ತಾಗಬೇಕು. ಅವರ ಮಕ್ಕಳು ಏನು ಓದಬೇಕು. ಏನು ಮಾಡಬೇಕು. ಅದನ್ನೆಲ್ಲಾ ಇವರು ನಿಶ್ಚಯಿಸಬೇಕು. ಕಡೆಗೆ ಅವರ ಮಕ್ಕಳ ಹುಟ್ಟಿದ ಹಬ್ಬಗಳಿಗೆ ಇವರ ಆಶೀರ್ವಾದಬೇಕು. ಈ ಗುಂಪಿನ ದಾಳಿಯನ್ನು ಗಾಂಧೀಜೀ ಸಹಿಸುವ ಹಾಗೆ ಯಾರೂ ಸಹಿಸಲಾರರು. ಒಮ್ಮೆ ಒಬ್ಬ ಜಾಗೀರುದಾರಿಣಿ ಬಂದಿದ್ದಳು, ಆಶ್ರಮದಲ್ಲಿ ಇರಲು. ಅಲ್ಲಿ ಮೊದಲೇ ಸ್ಥಳ ಸಂಕೋಚ. ಇದರಲ್ಲಿ ಆಕೆ ಶ್ರೀಮಂತಿನಿ. ಆಕೆ ತನ್ನ ಊಟ ಉಡಿಗೆಗಳ ಬಗ್ಗೆ ಗಾಂಧೀಜಿಯನ್ನು ಕೇಳಲು ಬಂದಿದ್ದಳು. ಬೆಂದ ಪದಾರ್ಥ ತಿನ್ನಬಹುದೇ ಬೇಡವೇ? ರೇಸಿಮೆ ಉಟ್ಟರೆ ಅಹಿಂಸೆಯ ಪಾಲನೆಯಾದೀತೋ ಬಿಟ್ಟೀತೋ? ಇವು ಆಕೆಯ ಮಹತ್ವದ ಸಂದೇಹ ಗಳು. ತಗಣಿಯನ್ನು ಕೊಲ್ಲಬಹುದೋ ಬೇಡವೋ ಎಂದು ಕೇಳಲು ಬರುವವರೂ ಉಂಟು. ಯಾರನ್ನೂ ಗಾಂಧೀಜೀ ಬೇಡವೆನ್ನುವುದಿಲ್ಲ. ಎಲ್ಲರನ್ನೂ ವಿಶ್ವಾಸದಿಂದ ಕಾಣುತ್ತಾರೆ.

ಹೀಗೆ ಹತ್ತೂ ಜನರ ಜೀವನವನ್ನು ತಮ್ಮ ಜೀವನದೊಂದಿಗೆ ಬೆರೆಸಿ ಕೊಂಡು ಹೋಗುವುದು ಅವರ ಸ್ವಭಾವ. ಅವರಿಗೆ ಅದರಲ್ಲಿ ಆನಂದ. ಸಂಸಾರಕ್ಕೆ ಸಂಬಂಧಿಸಿದ ಎಲ್ಲ ಸಣ್ಣ ಪುಟ್ಟ ಮಾತಿನಲ್ಲೂ ಅವರಿಗೆ ಶ್ರದ್ಧೆಯಿದೆ.

ನನ್ನ ಗುರುತಿನವರೊಬ್ಬರು ತಮ್ಮ ಮಗಳನ್ನು ಕರೆದುಕೊಂಡು ಆಶ್ರಮಕ್ಕೆ ಬಂದಿದ್ದರು. ಆ ಹುಡುಗಿಗೆ ಹದಿನೇಳು ವರ್ಷವಿರಬೇಕು. ಆದರೂ ಮೋರೆಯಲ್ಲಿ ಮೂವತ್ತು ವರ್ಷದ ಗಾಂಭೀರ್ಯವಿತ್ತು. ನಗೆ, ಉಲ್ಲಾಸ ಇರಲಿಲ್ಲ. ಆಕೆಯ ತಾಯಿ ಇಹಲೋಕದಿಂದ ಜಾರಿ ೧೬ ವರ್ಷ ವಾಗಿತ್ತು. ತಂದೆ ಮತ್ತೆ ಮದುವೆ ಮಾಡಿಕೊಳ್ಳಲಿಲ್ಲ. ಹೆಂಡತಿ ಹೋದಾಗ ಆತನಿಗೆ ೨೦ ವರ್ಷವಿರಬೇಕು. ತಂದೆ ಮಗಳು—ಇಬ್ಬರೇ ಒಂದು ಸಂಸಾರ ವಾಗಿ ಬೆಳದರು. ತಂದೆಯ ಇಚ್ಛೆ ಮಗಳನ್ನು ಮಹಿಲಾಶ್ರಮದಲ್ಲಿ ಸೇರಿಸ ಬೇಕೆಂದಿತ್ತು. ಗಾಂಧೀಜೀ ಆ ಹುಡುಗಿಯನ್ನು ಮಾತಾಡಿಸಿ ನೋಡಿದರು. ನಗೆಯಾಡಿದರು. ಆಕೆಯ ಮೌನ ಗಾಂಭೀರ್ಯವು ಅವರಿಗೆ ಅರ್ಥವಾ ಯಿತು. ಎಂಟು ದಿನದ ಮೇಲೆ ಮತ್ತೆ ತಂದೆ ಮಗಳು ಇಬ್ಬರೂ ಸಂಜೆಗೆ

ತಿರುಗಾಡಲು ಹೋಗುವಾಗ ಬಂದರು. ಸ್ವಲ್ಪ ದೂರ ಹೋದ ಮೇಲೆ ಗಾಂಧೀಜೀ ಓಡಲು ಮೊದಲಿಟ್ಟರು. "ಶಾಂತಾ, ನೀನೂ ಬಾ, ಓಡು" ಎಂದರು. ಆ ಹುಡುಗಿಯ ಹೆಸರು ಶಾಂತೆ. ಹಿಂದಿರುಗಿ ಆಶ್ರಮಕ್ಕೆ ಬರುವುದರೊಳಗಾಗಿ ಆ ಹುಡುಗಿ ನಗುವುದನ್ನು ಕಲಿತಿದ್ದಳು. ಈಗ ಮಹಿಲಾಶ್ರಮದಲ್ಲಿ ಉಳಿದ ಹುಡುಗಿಯರೊಂದಿಗೆ ಸುಖವಾಗಿದ್ದಾಳೆ.

ಇನ್ನೊಂದು ದಿನ ಹೈದರಾಬಾದಿನ ನನ್ನ ಗೆಳತಿಯೊಬ್ಬಾಕೆ ಬಂದಿದ್ದಳು. ಆಕೆಯ ಕೈಗಳನ್ನು ನೋಡಿ "ಇದೇನು ಬಳೆಗಳನ್ನು ತೊಟ್ಟಿದ್ದೀ. ಎಂದಿನಿಂದ?" ಎಂದರು. ಒಂದು ವರ್ಷದ ಹಿಂದೆ ಆಕೆ ಅವರನ್ನು ನೋಡಿದಾಗ ಕೈಯಲ್ಲಿ ಬಳೆಯಿರಲಿಲ್ಲವಂತೆ. ಸಣ್ಣ ಪುಟ್ಟ ಮಾತುಗಳನ್ನೂ ಲಕ್ಷ್ಯವಿಡುವುದರಲ್ಲಿ ಗಾಂಧೀಜೀಗೆ ಬಹಳ ಕೌಶಲ್ಯ.

ಆದರೆ ಈ ಸಂದರ್ಶನ–ಸಂಭಾಷಣೆಗಳಲ್ಲಿ ಪರದೇಶದಿಂದ ಬರುವ ಪ್ರವಾಸಿಗಳ ಮಾತುಕತೆಗಳೇ ಬಹಳ ಮುಖ್ಯ. ಅಷ್ಟು ದೂರದಿಂದ ಬರುವವರು ಗಾಂಧೀಜಿಯ ಸಿದ್ಧಾಂತಗಳನ್ನು ಚೆನ್ನಾಗಿ, ಆಳವಾಗಿ ಶೋಧಿಸಿದವರು. ಹಿಂದೂಸ್ಥಾನದ ಮೇಲೆ ಅವರಿಗೆ ಮಮತೆ ಇದ್ದೇ ಇರುತ್ತದೆ. ಇಲ್ಲದವರು ಬರುವುದೇ ಇಲ್ಲ. ಹಾಗೆ ಯಾರಾದರೂ ಕೇವಲ ವಿಲಾಸಯಾತ್ರೆಗಾಗಿ ಬಂದವರಿದ್ದರೆ ಅವರ ಕೆಲಸ ಒಂದು—autograph—ಹಸ್ತಾಕ್ಷರದಲ್ಲಿ ಮುಗಿಯುತ್ತದೆ. ಕೂತಲ್ಲೇ ಒಂದು ಫೋಟೋ ಆದರೂ ಆಗಬಹುದು. ಆದರೆ, ಅವೆರಡು ಮಹಾಕಾರ್ಯಗಳಿಗಾಗಿ ಅವರು ಅಷ್ಟೋ ಇಷ್ಟೋ ಹಣ ತೆತ್ತು ಹೋಗುತ್ತಾರೆ. ಇಂಥದರಲ್ಲಿ ಗಾಂಧೀಜೀ ಶುದ್ಧ ಕೋಮಟಿ. ಮೊನ್ನೆ ರಾಧಾಕೃಷ್ಣನ್‌ರ ಪುಸ್ತಕ ಪ್ರಕಟವಾಯಿತಲ್ಲ ಗಾಂಧೀ ಅಭಿನಂದನ ಗ್ರಂಥ. ಅದರ ಮೇಲೆ ಯಾರೋ ಗಾಂಧೀಜೀಯ ಹಸ್ತಾಕ್ಷರ ಬೇಡಿದರು. ಚೌಕಾಸಿಯಿಲ್ಲದೆ ವ್ಯಾಪಾರ ೨೫ ರೂಪಾಯಿಗಳಿಗೆ ನಿಶ್ಚಯವಾಯಿತು. ಆ ಗೃಹಸ್ಥ ತನ್ನ ಪುಸ್ತಕದಲ್ಲಿ ಸಹಿ ಮಾಡಿಸಿಕೊಂಡು ಹೋದ. ಸುತ್ತಲೂ ಕೂತಿದ್ದವರಲ್ಲಿ ಒಬ್ಬ ತಮಿಳ ಸೋದರನಿಗೆ ಇದೊಂದು ಮೇಲ್ಪಂಗ್ತಿಯಾಯಿತು, ಆಮೇಲೆ ಉರ್ದು, ತೆಲಗು, ಐದೇ ನಿಮಿಷದಲ್ಲಿ ೧೦೦ ರೂಪಾಯಿ ಗಳಿಸಿದರು ಗಾಂಧೀಜೀ.

ಆದರೆ ನಾನು ಹೇಳುವ ಪರದೇಶದ ಪ್ರವಾಸಿಗಳು ಬೇರೆ ಜನ. ಅವರು ಜ್ಞಾನಪಿಪಾಸಿಗಳು. ವಿಶ್ವಸೌಭ್ರಾತೃತ್ವ, ವಿಶ್ವಶಾಂತಿ, ಮಾನವ ಕೋಟಿಯ ಏಕತೆ, ಸತ್ಯ, ಪಾವಿತ್ರ್ಯಗಳನ್ನು ನಂಬಿ ಬಾಳಿನಲ್ಲಿ ಸತ್ಯವನ್ನೇ ಪ್ರಧಾನವಾಗಿ ಮಾಡಿಕೊಂಡ ಜನ. ಒಂದು ದೇಶವಲ್ಲ; ಚೀನಾ, ಜಪಾನ್ ಇಂಗ್ಲೆಂಡು-ಜರ್ಮನಿ, ಅಮೆರಿಕ-ಆಫ್ರಿಕ ಎಲ್ಲ ದೇಶಗಳಿಂದಲೂ ಬರುತ್ತಾರೆ. ಅವರವರಲ್ಲಿ ಪರಸ್ಪರ ಸಾಂಸ್ಕೃತಿಕ, ರಾಜಕೀಯ ವಿರೋಧಗಳಿವೆ. ಸಿದ್ಧಾಂತದಲ್ಲಿ ಭೇದಗಳಿವೆ. ಆದರೆ ಇಲ್ಲಿ ಬಂದಾಗ ಎಲ್ಲಾ ಒಂದೇ ಅನಂತಸಾಗರ. ಆಸ್ತಿಕರೂ ನಾಸ್ತಿಕರೂ ಇಬ್ಬರೂ ಗಾಂಧೀಜಿಯನ್ನು ಆಶ್ರಯಿಸುತ್ತಾರೆ. ನಿರೀಶ್ವರರಾದ ಬೌದ್ಧರಿಗೂ, ಕ್ರಿಸ್ತನಿಗೆ ಪೂರ್ಣವಾಗಿ ಶರಣು ಹೋದ ಸಗುಣೋಪಾಸಕರಿಗೂ ಇಲ್ಲಿ ಇಂಬಿದೆ. ಎಲ್ಲ ನದಿಗಳೂ ಇಲ್ಲಿ ಬಂದು ಸೇರುತ್ತವೆ.

ಈ ಸಂಭಾಷಣೆಗಳು ಬಹಳ ಗಹನವಾಗಿಯೂ ಮಹತ್ವಪೂರ್ಣವಾಗಿಯೂ ಇರುತ್ತವೆ. ಗಾಂಧೀಜಿಯ ಎಲ್ಲ ಸಂಭಾಷಣೆಗಳನ್ನೂ, ಬಾಯಿಂದ ಹೊರಬಿದ್ದ ಎಲ್ಲ ಮಾತನ್ನೂ ಬರೆದುಕೊಳ್ಳುವುದು ಅವರ ಕಾರ್ಯದರ್ಶಿಗಳಿಗೆ ರೂಢಿಯಾಗಿ ಹೋಗಿದೆ. ಅವುಗಳಲ್ಲಿ ಕೆಲವು "ಹರಿಜನ" ದಲ್ಲಿ ಆಗಾಗ ಶ್ರೀ. ಮಹದೇವ ದೇಸಾಯಿ ಅಥವಾ ಪ್ಯಾರೇಲಾಲರಿಂದ ಬರೆಯಲ್ಪಡುತ್ತವೆ. ಕೆಲವು ಅವರ ಟಿಪ್ಪಣಿ ಪುಸ್ತಕದಲ್ಲೇ ಉಳಿದು ಬಿಡುತ್ತವೆ.

ಸಾಧಾರಣವಾಗಿ ಗಾಂಧೀಜಿಯ ನಿತ್ಯಜೀವನದಲ್ಲಿ ಇಂಥ ಸಂದರ್ಶನಗಳು, ಪತ್ರವ್ಯವಹಾರವೇ ದೊಡ್ಡ ಭಾಗವನ್ನು ಆಕ್ರಮಿಸಿಕೊಂಡಿವೆ. ಮಧ್ಯಾಹ್ನವೆಲ್ಲ ಈ ಸಂದರ್ಶನಗಳಿಂದ ತುಂಬಿಹೋಗುತ್ತದೆ. ಅಗತ್ಯಬಿದ್ದರೆ ಬೆಳಿಗ್ಗೆಯೂ ಸರಿ. ಆದರೆ ಈ ಸಂದರ್ಶನ (interview)ಗಳಿಗೂ ಒಂದು ಪದ್ಧತಿ, ಕ್ರಮ ಇದೆ. ನಾವು ನಮ್ಮ ಗೆಳೆಯರ ಮನೆಗೆ ತಿರುಗಾಡುತ್ತ ಹೋಗಿಬರುವುದರಲ್ಲಿರುವ ನಿರ್ನಿಯಮ (informality) ಇವುಗಳಲ್ಲಿದೆ. ಇಂಥ ಅನೇಕ ಸಂದರ್ಶನಗಳಲ್ಲಿ ನಾನು ಸಾಕ್ಷಿಯಾಗಿದ್ದೆ. ಎಲ್ಲದರಲ್ಲೂ ಒಂದು ಸರಳತೆ, ಒಂದು ಬಗೆಯ ಅದಾಂಭಿಕತೆ (unorthodoxy) ಇರುತ್ತಿತ್ತು. ಹೀಗೆಂದಮಾತ್ರಕ್ಕೆ ಯಾರುಬೇಕಾದರೂ ಯಾವಾಗಬೇಕಾದರೂ

ಹೋಗಿ ನಮ್ಮ ಗೆಳೆಯರ ಮನೆಬಾಗಿಲು ತಟ್ಟುವಂತೆ, ಗಾಂಧೀ ಸಂದರ್ಶನಕ್ಕೆ ಹೋಗಬಹುದು ಎಂದಲ್ಲ. ಅಥವಾ ನಮ್ಮ ಹೆಸರು ಗೋತ್ರ ಹೆಗ್ಗಳಿಕೆಗಳ ಚೀಟಿ–ಭೇಟಿಚೀಟಿಯ–ಬೆನ್ನ ಹಿಂದೆ ವ್ಯಾಪಾರಸಂಸ್ಥೆಗಳಲ್ಲಿ, ಕಚೇರಿಗಳಲ್ಲಿ ಹೋಗುವಂತೆಯೂ ಅಲ್ಲ. ಭೇಟಿಗಾಗಿ ಮೊದಲು ಏರ್ಪಾಟು ಮಾಡಿಕೊಳ್ಳ ಬೇಕು. ಕೆಲವರು ಮೊದಲೇ ಬರೆದು ನಿಶ್ಚಯಿಸಿಕೊಳ್ಳುತ್ತಾರೆ. ಕೆಲವರು ವರ್ಧಾದವರೆಗೆ ಬಂದು ಇಲ್ಲಿ ನಿಶ್ಚಯಿಸಿಕೊಳ್ಳುತ್ತಾರೆ. ಮೊದಲೇಬರೆದು ನಿರ್ಧರಿಸಿದರೆಸರಿ. ಇಲ್ಲವಾದರೆ ಕೆಲವು ವೇಳೆ ೩–೪ ದಿನ ವರ್ಧಾದಲ್ಲಿ ಕೊಳೆಯಬೇಕಾದೀತು.

ದರ್ಶನಾಪೇಕ್ಷಿಗಳು ಲೆಕ್ಕವಿಲ್ಲದಷ್ಟಾದುದರಿಂದ ಹೀಗೊಂದು ನಿಯಮ, ಕ್ರಮ ನಿರ್ಮಾಣವಾಗಿದೆ. ಇದೆಲ್ಲಾ ಕಾಂಗ್ರೆಸ್ಸು ಅಧಿಕಾರಕ್ಕೆ ಬಂದುದರ ಫಲ. ಮೊದಲು ಇಷ್ಟು ಜನ ಬರುತ್ತಿರಲೂ ಇಲ್ಲ. ಎಲ್ಲೋ ಕೆಲವರು ಆಪ್ತರು, ಅನುಯಾಯಿಗಳು ನಡಿಗೆಯಿಂದ ಹೋಗುತ್ತಿದ್ದರು. ಈಗಂತೂ ಮೊದಲೇ ಏರ್ಪಾಡಾಗದೆ ಭೇಟಿಯ ಸಂಭವವೇ ಇಲ್ಲ. ಅವರವರ ವಿಷ ಯದ ಮಹತ್ವದ ಪ್ರಕಾರ ಭೇಟಿಗಳ ಅನುಕ್ರಮ. ಆದರೆ ಆ ಪಟ್ಟಿಯಲ್ಲಿ ಒಮ್ಮೆ ಹೆಸರು ಬಂದರಾಯಿತು. ಆ ಹೊತ್ತಿಗೆ ಸರಿಯಾಗಿ, ಆ ದಿನ ಗಾಂಧೀ ಜಿಯ ಸಂದರ್ಶನ ಆಗಿಯೇ ತೀರಬೇಕು. ಜ್ವರ ಬರಲಿ, ಮಳೆ ಸುರಿಯಲಿ, ಒಮ್ಮೆ ನಿಶ್ಚಿತವಾದ ಕಾರ್ಯಕ್ರಮ ಸರಿಯಾಗಿ ನೆರವೇರಲೇಬೇಕು. ಒಮ್ಮೆ ಸಂಕಲ್ಪಮಾಡಿದ ಮೇಲೆ ಮುರಿಯುವ ಸ್ವಭಾವ ಗಾಂಧೀಜಿಗೆ ಇಲ್ಲ. ಸಣ್ಣ ಪುಟ್ಟ ಮಾತಿನಲ್ಲೂ ಅವರಿಗೆ ಆ ಹಿಡಿತ ಬಹಳ.

ಒಂದು ದಿನ ಕೆಲವರು ಗೆಳೆಯರಿಗೆ ' ನಾಳೆ ಮಧ್ಯಾಹ್ನ ಬನ್ನಿ ' ಎಂದು ಗಾಂಧೀಜೀ ಹೇಳಿದರು. ಅದೇ ದಿನ ಸಂಜೆಗೆ, ಮರುದಿನ ಮೌನವಾಗಿರ ಬೇಕೆಂದು ಸಂಕಲ್ಪ ಮಾಡಿದರು. ಇವರಿಗೆ ಇದು ಗೊತ್ತಾಗಲಿಲ್ಲ. ಹೇಳಿದ್ದ ಹೊತ್ತಿಗೆ ಸರಿಯಾಗಿ ಹೋದರು. ಆಗ ಗಾಂಧೀಜಿಗೆ ತಾವು ಹೇಳಿದ್ದ ಮಾತು ನೆನಪಾಯಿತು. ಕೂಡಲೆ ಇವರನ್ನು ಕರೆಸಿಕೊಂಡರು. ಇವರಿಗೆ ಕೊಟ್ಟ ಮಾತು ಮೊದಲು. ಆದಕ್ಕಾಗಿ ಇವರ ಸಂಭಾಷಣೆಯ ಮಟ್ಟಿಗೆ ಅಷ್ಟು ಹೊತ್ತು ಮೌನವನ್ನೂ ಬಿಡುವುದಾಗಿ ಹೇಳಿ ಇವರೊಡನೆ ಮಾತುಕತೆ ನಡೆಸಿ ದರು. ಅದು ಮುಗಿದ ಮೇಲೆ ಮತ್ತೆ ಮೌನ.

ಒಮ್ಮೆ ಉತ್ಕಲ ಪ್ರಾಂತದ ಶಾಸನಸಭೆಯ ಅಧ್ಯಕ್ಷ ಶ್ರೀ. ಮುಕುಂದ ಬಾಬು ವರ್ಧಾಕ್ಕೆ ಬಂದಿದ್ದರು. ಗಾಂಧೀಜಿಯ ಸಂದರ್ಶನ ಇಂಥ ದಿವಸ, ಇಷ್ಟು ಗಂಟೆಗೆ ಎಂದು ಗೊತ್ತು ಮಾಡಿಸಿಕೊಂಡರು. ಆ ದಿನಕ್ಕೆ ಹಿಂದಿನ ದಿನ ನಾವು ಕೆಲವರು ಸೇವಾಗ್ರಾಮಕ್ಕೆ ಹೋಗಬೇಕಾಗಿತ್ತು. ನಮ್ಮ ಗಾಡಿಯಲ್ಲಿ ಸ್ಥಳವಿತ್ತು. ಏನೋ ಯೋಚಿಸಿಕೊಂಡು ಅವರೂ ನಮ್ಮ ಜೊತೆಯಲ್ಲೇ ಬಂದರು. ನಮ್ಮ ಮಾತು ಕತೆಯಾದಮೇಲೆ ಮುಕುಂದಬಾಬು ಬಂದಿರುವುದನ್ನು ಸೂಚಿಸಲಾಯಿತು. 'ನಾಳೆ ಬಾ ಎಂದು ಹೇಳಿದ್ದೆನಲ್ಲ. ಇಂದೇಕೆ ಬಂದದ್ದು?' ಎಂದು ಗಾಂಧೀಜೀ ಕೇಳಿದರು. ನಾಳೆ ಹಿಂದಿರುಗಲು ಅನುಕೂಲವಾದರೆ ಉತ್ತಮವೆಂದು ಇಂದೇ ಬಂದಿದಾರೆ ಎಂದು ಯಾರೋ ತಿಳಿಸಿದರು. 'ಸಾಧ್ಯವಿಲ್ಲ. ಬಿಡುವು ನೋಡಿಯೇ ನಾಳೆ ಎಂದು ಹೇಳಿದ್ದೇನೆ. ಈಗೆಲ್ಲಿದೆ ಬಿಡುವು?' ಎಂದರು. ನಮ್ಮೊಡನೆ ಬಾಬು ವರ್ಧಾಕ್ಕೆ ಬಂದರು.

ಒಮ್ಮೆ ರಾಷ್ಟ್ರಪತಿ ಸುಭಾಷರು ಸೇವಾಗ್ರಾಮಕ್ಕೆ ಬಂದರು. ಅವರು ಬಂದಾಗ ಅವರ ಭೇಟಿಗೆ ಇನ್ನೂ ಹತ್ತು ನಿಮಿಷವಿತ್ತು; ಮತ್ತಾರದೋ ಮಾತುಕತೆ, ಇಲ್ಲವೆ ಪತ್ರವ್ಯವಹಾರ ಓದುವುದೋ ನಡೆದಿತ್ತು. ಆ ಹತ್ತು ನಿಮಿಷ ರಾಷ್ಟ್ರಪತಿ ಬಿಸಿಲಿನಲ್ಲಿ ಕಾಯಬೇಕಾಯಿತು.

ಹೊಸದಾಗಿ ಸೇವಾಗ್ರಾಮಕ್ಕೆ ಬರುವ ಹರಿಯದ ಜನಕ್ಕೆ ಇದೆಲ್ಲಾ ಚಕ್ರಬಿಂಬನಕೋಟೆಯ ಹಾಗೆ ಕಾಣುತ್ತದೆ. ಕೆಲವುಮಟ್ಟಿಗೆ red-tapism, ಅಧಿಕಾರದ ದಂಭಾಚಾರವೆನಿಸಿಬಿಡುತ್ತದೆ. ಕೆಲವರು ಇದರ ಬಗ್ಗೆ ದೂರಿಯೂ ಇದಾರೆ. ಆದರೆ, ದಿನವೂ ಬಂದುಹೋಗುವ ಜನವನ್ನು ನೋಡಿದರೆ ಈ ನಿಯಮವಿಲ್ಲದಿದ್ದರೆ ಗಾಂಧೀಜಿಯ ಆರೋಗ್ಯ ಉಳಿಯುವುದು ಸಾಧ್ಯವಿತ್ತೇ ಎನಿಸುತ್ತದೆ. ಅದನ್ನು ತಿಳಿದು ಸಂತೋಷದಿಂದ ಈ ನಿಯಮಪಾಲನೆಯಲ್ಲಿ ಗಾಂಧೀಜಿಗೆ ನೆರವಾಗುವ ಮನಸ್ಸಾಗುತ್ತದೆ.

ಒಮ್ಮೆ ಆ ಗುಡಿಸಲೊಳಗೆ ಹೋಗಿ ನಮಸ್ಕಾರ ಮಾಡಿಯೋ, ಬರೀ ಕೈ ಮುಗಿದೋ ಕೂತರಾಯ್ತು, ನಮ್ಮ ಮನೆಯಲ್ಲೇ ಕೂತು ಮಾತಾಡುವಂತೆ ಅನಿಸುತ್ತದೆ. ಸಂಭಾಷಣೆಯಲ್ಲಿ ಅಷ್ಟು ಆಪ್ತತೆ. ಎಲ್ಲ ಸಣ್ಣಪುಟ್ಟ ಮಾತಿಗೂ ಗಮನಕೊಟ್ಟು ಕೂಲಂಕಷವಾಗಿ ವಿಚಾರಿಸಿ, ವಿಮರ್ಶಿಸುತ್ತಾರೆ.

ಅಭಿಮಾನ ವಿಶ್ವಾಸಗಳ ಹೊನಲೊಂದು ಹರಿದಂತಾಗುತ್ತದೆ. ಗಾಂಧೀಜಿಯು ಇದಿರಿನಲ್ಲಿ ಯಾರೂ ಅಲ್ಪರಲ್ಲ. ಎಂಥ ಪಾಪಿಗೂ ತನ್ನ ಬಾಳು ಪೂರ್ಣ ಹಾಳಾಗಿಲ್ಲವೆಂದೂ, ಇನ್ನೂ ಪರಾವರ್ತನಕ್ಕೆ ಕಾಲವಿದೆಯೆಂದೂ ನಂಬಿಗೆ ಸಿಗುತ್ತದೆ ಇಲ್ಲಿ. ಸಾಮಾನ್ಯ ಜನರ ಜೀವನ ಶಕ್ತಿಗೂ ಒಂದು ಉತ್ತೇಜನ ಕೊಟ್ಟು ಅವರನ್ನೂ 'ಪುರುಷ'ರನ್ನಾಗಿ ಮಾಡುವ ಹರಕೆ ಅದು. ಹೆಚ್ಚು ಪರಿಚಯವಿದ್ದರೆ ಪೈತಡವುತ್ತಾರೆ. ನಗೆ ಮಾತು ಆಡಿ ನಗಿಸುತ್ತಾರೆ. ಮಾತು ಮುಗಿದ ಮೇಲೆ ಅಲ್ಲಿ ವ್ಯರ್ಥವಾಗಿ ಕೂತುಕೊಳ್ಳಲು ಸಾಧ್ಯವಿಲ್ಲ. ಅವರೇ 'ಭಗ್‌ಜಾವ್'–ಓಡು ಎಂದು ಹೇಳಿ ಕಳಿಸಿ ಬಿಡುತ್ತಾರೆ.

ಒಂದು ಗುಂಪು ಹೊರಗೆ ಬಂದೊಡನೆ ಮತ್ತೊಂದು. ಒಬ್ಬರು ಖಾದೀ ಮಾರಾಟ ಕಡಿಮೆ ಆಗುತ್ತಿರುವ ಸಮಸ್ಯೆಯನ್ನಿಟ್ಟರೆ ಇನ್ನೊಬ್ಬರು ಕಿಸಾನ–ಕಾಂಗ್ರೆಸ್ ಜಗಳದ ಮಾತು ಆಡುತ್ತಾರೆ. ಒಬ್ಬರು ಸಾಮ್ಯವಾದು ಗಂಭೀರ ಚರ್ಚೆ ಮಾಡಿದರೆ, ಅವರ ಹಿಂದೆ ಬಂದವರು ವರ್ಧಾ ಶಿಕ್ಷಣದ ಸಂದೇಹಗಳನ್ನಿಡುತ್ತಾರೆ. ಇನ್ನೊಬ್ಬರು ಸಂಸ್ಥಾನಗಳ ಸತ್ಯಾಗ್ರಹ, ಕಾಂಗ್ರೆಸ್ಸಿನಲ್ಲಿ ದೋಷಗಳು,–ಹೀಗೆ. ಇವೆಲ್ಲದರಲ್ಲೂ ಗಾಂಧೀಜೀ ದೃಷ್ಟಿ ಪಸರಿಸಬೇಕು. ಎಲ್ಲರನ್ನೂ ಸಮಾಧಾನಗೊಳಿಸಬೇಕು. ಬೇರೊಬ್ಬರಿಗೆ ಸಾಧ್ಯವಾಗುವ ಮಾತಲ್ಲ.

ಸಂಜೆ ೫ ಗಂಟೆಗೆ ಸಾಧಾರಣವಾಗಿ ಎಲ್ಲ ಸಂದರ್ಶನಗಳೂ ಮುಗಿಯುತ್ತವೆ. ಆಮೇಲೆ ಗಾಂಧೀಜೀ ಬಚ್ಚಲು ಮನೆಗೆ ಹೋಗಿ ಕೈಕಾಲು ತೊಳೆದುಕೊಳ್ಳುತ್ತಾರೆ. ಮನಸ್ಸಿಗೆ ಬಂದರೆ ಸ್ನಾನವೂ ಆಗುತ್ತದೆ. ಅಲ್ಲಿಂದ ಬಂದ ಮೇಲೆ ಸಂಜೆಯ ಊಟ. ಗಾಂಧೀಜಿಯ ಊಟದ ಕತೆ ಬಹಳ ದೊಡ್ಡದು. ಈ ಎಪ್ಪತ್ತು ವರ್ಷದ ಬಾಳಿನಲ್ಲಿ ಅವರು ಮಾಡಿದ ಆಹಾರ ಸಂಶೋಧನೆಗಳನ್ನೂ ಅವರ ಪ್ರಯೋಗಗಳನ್ನೂ ಹೇಳುತ್ತಾ ಹೋದರೆ ಅದೊಂದು ಭಾರತವೇ ಆದೀತು. ಆಹಾರದಲ್ಲಿ ಮೊದಲಿನಿಂದಲೂ ಅವರಿಗೆ ನಿಯಮ ಬಹಳ. ಕೆಲವುದಿನ ಉಪ್ಪು ಬಿಟ್ಟರು. ತುಪ್ಪ ಹಾಲು ಕೆಲವು ದಿನ. ಮೂರೇ ಪದಾರ್ಥಗಳನ್ನು ತಿನ್ನಬೇಕೆಂಬ ವ್ರತ ಕೆಲವುಕಾಲ. ನಡುವೆ ಹಸೀ ಆಹಾರವೇ ಸರಿ, ಬೇಯಿಸಬಾರದು ಎಂದು ಹಟಹಿಡಿದರು.

ಕಡಲೆ ಗೋಧಿಗಳನ್ನು ನೆನೆಹಾಕಿ, ಮೊಳಕೆಯೊಡೆಸಿ ಅವನ್ನು ತಿನ್ನುವ ಅಪ ಕ್ವಾಹಾರದ ಪ್ರಯೋಗ ಸ್ವಲ್ಪ ದಿನ ನಡೆಯಿತು.

ಈಗಲೂ ಅವರ ಆಹಾರ ಬಹಳ ಕ್ಲುಪ್ತವಾಗಿದೆ. ಒಂದೆರಡು ಡಬಲ್ ರೊಟ್ಟಿ (ನಾನ್‌ರೊಟ್ಟಿ)ಯ ತುಣುಕುಗಳು, ಸಾಮಾನ್ಯವಾಗಿ ನಾಲ್ಕು ಟೊಮಾಟೋ ಹೋಳು, ಮಜ್ಜಿಗೆ. ರೊಟ್ಟಿಯನ್ನು ಟೋಸ್ಟ್ ಮಾಡುತ್ತಾರೆ. ಪಲ್ಯ ಬೇರೆಯಾದರೂ ಆಗಬಹುದು. ಮೇಕೆಯ ಹಾಲು ಇದ್ದೇ ಇದೆಯಲ್ಲ. ಯಾರಾದರೂ ಹಣ್ಣುಹಂಪಲು ಕಳಿಸಿದ್ದರೆ ಅವನ್ನೂ ತೆಗೆದುಕೊಳ್ಳುತ್ತಾರೆ. ಯಾವಾಗಲಾದರೂ ಸಪ್ಪನೆ ಕಟ್ಟನ್ನು ಉಪಯೋಗಿಸುತ್ತಾರೆ. ಕಡೆಗೆ ಒಂದು ಹಪ್ಪಳ. ಊಟದ ಕೊನೆಯಲ್ಲಿ ಹಪ್ಪಳವನ್ನು ಮೆಲ್ಲುವುದು ಉತ್ತರ ದೇಶದ ರೂಢಿ. 'ಭೋಜನಾಂತಂ ಹಿ ತಕ್ರಂ ಸ ಲವಣಂ' ಎಂದು ನಮ್ಮಲ್ಲಿ ರೂಢಿಯಿದ್ದಂತೆ, ಅಲ್ಲಿ ಹಪ್ಪಳ.

ಸಂಜೆ ೬ ರೊಳಗಾಗಿ ಊಟ ಮುಗಿಯುತ್ತದೆ. ಕತ್ತಲಾದ ಮೇಲೆ ಊಟ ಮಾಡಬಾರದೆಂಬ ಜೈನ ನಿಯಮವನ್ನು ಗಾಂಧೀಜೀ ಸ್ವೀಕರಿಸಿ ಬಹಳ ದಿನವಾಯಿತು. ಊಟವಾದ ಮೇಲೆ ತಮ್ಮ ಉದ್ದನೆ ಊರುಗೋಲು ಹಿಡಿದು ತಿರುಗಾಡಲಿಕ್ಕೆ ಹೋಗುತ್ತಾರೆ. ವರ್ಧಾದಾರಿಯಲ್ಲಿ ಸುಮಾರು ಮೂರು ಮೈಲಿನವರೆಗೆ ಅವರ ಓಡಾಟ. ಒಮ್ಮೊಮ್ಮೆ ಮಾತಾಡುತ್ತಾ ವರ್ಧಾದವರೆಗೂ ಹೋಗಿಬಿಡುತ್ತಾರೆ. ತಿರುಗಾಡಲು ಹೊರಟರೆ ಜೊತೆಯಲ್ಲಿ ಆಶ್ರಮದ ಜನವೆಲ್ಲ ಹೊರಡುತ್ತದೆ. ಇದಲ್ಲದೆ ದರ್ಶನಾಪೇಕ್ಷಿಗಳಾಗಿ ಬಂದ ಎಷ್ಟೋ ಜನ ಸಂಜೆಯ ಈ ಸಮಯಕ್ಕಾಗಿ ಕಾದಿರುತ್ತಾರೆ. ಬೇರೆ ಏನೂ ಕೆಲಸವಿಲ್ಲದೆ ಸುಮ್ಮನೆ ಗಾಂಧೀಜಿಯನ್ನು ನೋಡಿ ಆನಂದಿಸಬೇಕೆನ್ನುವ ಜನರಿಗೆ ಇದು ಸುಮುಹೂರ್ತ. ದರ್ಶನಕ್ಕಾಗಿ ಪ್ರಯತ್ನಪಟ್ಟು ನಿರಾಶರಾದವರಿಗೆ ಇದು ಆಸೆಯ ಸಂದರ್ಭ. ತಿರುಪತಿಯಲ್ಲಿ ಹಣಕಾಸು ಕೊಟ್ಟು ದೇವರ ಸೇವೆಮಾಡಿಕೊಳ್ಳಲಾರದ ಬಡಬಗ್ಗರಿಗಾಗಿ 'ಧರ್ಮಸೇವೆ'ಯೊಂದುಂಟು. ಆಗ ಯಾರು ಬೇಕಾದರೂ ಹೋಗಿ ದೇವರನ್ನು ನೋಡಬಹುದು. ಇದು ಗಾಂಧೀಜಿಯ 'ಧರ್ಮದರ್ಶನ'ದ ಸಮಯ. ಸ್ವಲ್ಪ ಚುರುಕಾದವರು, ಅದರಲ್ಲೂ ಪತ್ರಿಕಾಕಾರರು ಈ ಸಮಯ ಸಾಧಿಸಿ ನಾಲ್ಕು ಮಾತು ಆಡಿ, ಆಡಿಸುತ್ತಾರೆ. ಗಾಂಧೀಜೀ

ನಗುನಗುತ್ತ ಮಾತಾಡುತ್ತಾರೆ. ಒಮ್ಮೊಮ್ಮೆ ಈ ಗುಂಪು ೫೦ರ ಮನೆ ಮೀರಿಹೋಗುವುದುಂಟು.

ಗಾಂಧೀಜಿಗೆ ಮಕ್ಕಳನ್ನು ಕಂಡರೆ ಬಹಳ ಪ್ರೀತಿ. ಆಶ್ರಮಕ್ಕೆ ಬಂದವರಲ್ಲಿ ಯಾರಾದರೂ ಮಕ್ಕಳನ್ನು ಕರೆತಂದಿದ್ದರೆ ಅವರನ್ನು ಜೊತೆ ಯಲ್ಲಿ ತಿರುಗಾಡಲು ಕರೆಸಿಕೊಂಡು ಹೋಗುತ್ತಾರೆ. ಯಾರೂ ಇರದಿದ್ದರೆ ಅವರ ಮೊಮ್ಮಗ ಕನೂ ಇದ್ದೇ ಇದಾನೆ. ಅವನ ಸಂಗಡ, ಉಳಿದವ ರೊಡನೆ, ವಿನೋದವಾಗಿ ಮಾತಾಡುತ್ತ ಸುತ್ತಲಿನ ಹೊಲಗಳನ್ನು ಸುತ್ತಿ ಬಿಡುತ್ತಾರೆ. ಕನೂ ಅಲ್ಲದೆ ಸಂಜೆಯ ತಿರುಗಾಟದಲ್ಲಿ ಗಾಂಧೀಜಿಯನ್ನು ತಪ್ಪದೆ ಹಿಂಬಾಲಿಸುವ ಮತ್ತೊಂದು ವ್ಯಕ್ತಿ ಡಾ. ಸುಶೀಲಾನಾಯರ್. ಈಕೆ ಗಾಂಧೀಜಿಯ ಅಂಗರಕ್ಷಕಳು. ಅಹಿಂಸಾವಾದಿಯಾದುದರಿಂದ ಗಾಂಧೀಜಿಗೆ ಅಬಲೆಯೇ ಅಂಗರಕ್ಷಕಳಾದುದು ಸರಿಯೇನೋ! ಕತ್ತಲಾದರೆ ಬೆಳಕು ಇರಲೆಂದು ಕೈಯಲ್ಲಿ ಕಂದೀಲು ಹಿಡಿದು ಸುಶೀಲಾ ಅವರ ಜೊತೆ ಯಲ್ಲಿ ಬರುತ್ತಾಳೆ. ದಾರಿ ಕಾಡುದಾರಿ. ದಿಣ್ಣೆತಗ್ಗು ಬಹಳ. ಹೀಗಾಗಿ ಗಾಂಧೀಜಿಗೆ ನಡೆಯುವಾಗ ಆಸರೆ ಬೇಕಾಗುತ್ತದೆ. ಹಾದಿ ಸಮನಿಲ್ಲ ದಾಗ ಪಕ್ಕದಲ್ಲಿ ಬರುವ ಸುಶೀಲಾಳ ಹೆಗಲಮೇಲೆ ಕೈಯೂರಿ ನಡೆಯು ತ್ತಾರೆ ಗಾಂಧೀ.

ಸುಶೀಲಾ ನಾಯರ್ ಎಂ.ಬಿ.ಬಿ.ಎಸ್. ತೇರ್ಗಡೆಹೊಂದಿ ದೆಹಲಿಯ ಆಸ್ಪತ್ರೆಯಲ್ಲಿ House Surgeon ಆಗಿ ಕೆಲಸ ಮಾಡುತ್ತಿದ್ದಳು. ಆಕೆ ಪಂಜಾಬೀ ಜನ. ಗಾಂಧೀಜಿಯ ಕಾರ್ಯದರ್ಶಿ ಪ್ಯಾರೆಲಾಲರ ತಂಗಿ. ಈಗ ವರ್ಷ ವರ್ಷವರೆಯ ಕೆಳಗೆ ಪ್ಯಾರೆಲಾಲ್ ಬಹಳ ಬೇನೆ ಬಿದ್ದರು. ಬದುಕುವುದೇ ಕಠಿನವಾಯಿತು. ಆಗ ಅವರನ್ನು ಆರೈಕೆ ಮಾಡಿ, ಮದ್ದು ಕೊಟ್ಟು ಬದುಕಿಸಿಕೊಳ್ಳಲು ತನ್ನ ಕೆಲಸವನ್ನು ಪರಿತ್ಯಾಗ ಮಾಡಿ ಸೇವಾ ಗ್ರಾಮಕ್ಕೆ ಬಂದಳು. ನಾಲ್ಕಾರು ತಿಂಗಳ ಮೇಲೆ ಪ್ಯಾರೆಲಾಲ್‌ಗೆ ಗುಣ ವಾಯಿತು. ಆ ಕಾಲದಲ್ಲಿ ಅವರ ತಂಗಿ ಆಶ್ರಮದ ಜನರನ್ನು ಹಳ್ಳಿಯ ಬಡವರನ್ನು ತನ್ನವರನ್ನಾಗಿ ಮಾಡಿಕೊಂಡಿದ್ದಳು. ಅಲ್ಲೇ ಇದ್ದುಬಿಡುವ ಮನಸ್ಸಾಯಿತು. ಅದೇ ಹೊತ್ತಿಗೆ ಗಾಂಧೀಜಿಯ ಆರೋಗ್ಯ ಕೆಟ್ಟಿತು. ಹಳ್ಳಿಯ ಜನರಿಗೆ, ಆಶ್ರಮದವರಿಗೆ ಬೇನೆಬೇಸರಿಕೆಗಳ ಹೊತ್ತಿನಲ್ಲಿ ವೈದ್ಯರ

ಅಗತ್ಯವೂ ಬೀಳುತ್ತ ಬಂತು. ಡಾ. ಸುಶೀಲಾ ನಾಯರ್ ಅಂದಿನಿಂದ ಅಲ್ಲೇ ನಿಂತಿದಾರೆ. ಗಾಂಧೀಜಿಯ ಆರೋಗ್ಯ ಆಕೆಗೆ ಸೇರಿದ್ದು. ಅದರ ಹೊಣೆ ಆಕೆಯದು. ಆಕೆ ಗಾಂಧಿಜೀಯ ಆರೋಗ್ಯಕ್ಕಾಗಿ ಪಡುವ ಕಷ್ಟ, ತೆಗೆದುಕೊಳ್ಳುವ ಶ್ರದ್ಧೆ ನೋಡಿದವರೇ ಅರಿಯಬಲ್ಲರು.

ಗಾಂಧೀಜಿಯ ನಡಿಗೆ ಬಹಳ ಹಗುರು ಅವರ ಮೈ ಪಕ್ಕಿಯಂತೆ ಲಘು. ಹೆಜ್ಜೆ ಭಾರವಾದುದಲ್ಲ. ಅವರು ಬೇಗ ಬೇಗ ನಡೆದರೆ ಹಾಗೇ ಗಾಳಿಯಲ್ಲಿ ತೇಲಿಕೊಂಡು ಹೋದಂತೆ ಕಾಣುತ್ತದೆ. ಹೆಚ್ಚಾಗಿ ಕರ್ಮನಿರತರಾದವರು ಹೀಗೇ ಎಂದು ತೋರುತ್ತದೆ. ಅವರ ಜೀವನದ ನಿಷ್ಠುರ ನಿಯಮದಿಂದ, ಅವಿಶ್ರಾಂತ ಕರ್ತವ್ಯ ತತ್ಪರತೆಯಿಂದ ಅವರ ಚಲನವಲನಗಳಲ್ಲಿ ಒಂದು ಗತಿ, ಲಯ ಕಂಡುಬರುತ್ತದೆ. ಸಾಮಾನ್ಯ ಜನರ ತಾಮಸಜೀವನದಲ್ಲಿ ಆ ದೃಶ್ಯ ಕಾಣುವುದಿಲ್ಲ.

ತಿರುಗಾಡುವಾಗ ಊರೆಗೋಲು ಎಷ್ಟು ಮುಖ್ಯವೋ ಗಾಂಧೀಜಿಗೆ ಗಡಿಯಾರುವೂ ಅಷ್ಟೇ ಮುಖ್ಯ. ಅವರು ಬನೀನು, ಪೈರಣು—ತೊಡುವುದು ಬಿಟ್ಟು ಬಹಳ ದಿನವಾಯಿತಷ್ಟೆ. 'ನಂಗಾ ಫಕೀರ,' ಬೆತ್ತಲೆ ಸನ್ಯಾಸಿ—ಎಂಬ ಬಿರುದನ್ನೇ ಸಂಪಾದಿಸಿದಾರೆ. ಆದ್ದರಿಂದ ಗಡಿಯಾರವನ್ನು ಸೊಂಟದಲ್ಲಿ ಉಡಿದಾರಕ್ಕೆ ಕಟ್ಟಿಕೊಳ್ಳುತ್ತಾರೆ. ಗಡಿಯಾರವಿಲ್ಲದೆ ಗಾಂಧೀಜೀ ಒಂದು ಗಳಿಗೆಯನ್ನೂ ಕಳೆಯುವುದಿಲ್ಲ. ಎಲ್ಲ ಕೆಲಸಗಳೂ ನಿಯಮಿತ ರೀತಿಯಲ್ಲಿ ಗೊತ್ತಾದ ಕಾಲಕ್ಕೆ ನಡೆಯಬೇಕು. ಇದರಲ್ಲಿ ಏನಾದರೂ ಹೆಚ್ಚುಕಡಮೆಯಾದರೆ ಅವರ ಮನಸ್ಸಿಗೆ ಬಹಳ ವ್ಯಸನವಾಗುತ್ತದೆ. ಕಾಲದ ಬೆಲೆಯನ್ನು ಗಾಂಧೀಜೀ ಚೆನ್ನಾಗಿ ಅರಿತಿದಾರೆ. ಈ ಪಾಠ ಅವರ ಜೀವನದ ಸಣ್ಣಪುಟ್ಟ ಮಾತುಗಳಲ್ಲಿಯೂ ಕಾಣುತ್ತದೆ.

ಈಗ ಅವರಲ್ಲಿರುವ ಗಡಿಯಾರ ಜವಾಹರಲಾಲರು ಅವರಿಗೆ ಕೊಟ್ಟದ್ದು.



# ಗಾಂಧೀಜೀ–ಒಂದು ದಿನ

ಆಶ್ರಮದಲ್ಲಿ ಪ್ರಾರ್ಥನೆ ಎರಡು ಸಲ ನಡೆಯುತ್ತದೆ. ಮುಂಜಾನೆ ೪-೩೦ಕ್ಕೆ ಒಮ್ಮೆ, ಸಂಜೆ ೭ಕ್ಕೆ ಒಮ್ಮೆ. ಆಶ್ರಮದ ಅಂಗಳದಲ್ಲಿ ಎಲ್ಲರೂ ಸೇರುತ್ತಾರೆ. ಹೊರಗಿನವರೂ ಪಾರ್ಥನೆಯಲ್ಲಿ ಸೇರಬಹುದು. ಅನೇಕರು ಸೇರುವುದೂ ಉಂಟು. ಚಾಪೆಗಳ ಮೇಲೆ ಎಲ್ಲರೂ ಗುಂಪಾಗಿ ಕುಳಿತರೆ ಗಾಂಧೀಜೀ ಬೆನ್ನುಹಲಗೆಗೆ ಆತುಕೊಂಡು ನಡುವೆ ಕೂತು ಕೊಳ್ಳುತ್ತಾರೆ. ಆಶ್ರಮವಾಸಿಗಳಲ್ಲಿ ಯಾರಾದರೊಬ್ಬರು ಪ್ರಾರ್ಥನೆಯನ್ನು ಮೊದಲು ಹೇಳು ಉಳಿದವರೆಲ್ಲ ಅವರನ್ನನುಸರಿಸಿ ಹೇಳುತ್ತಾರೆ. ಶ್ಲೋಕ, ಗೀತ, ಭಜನೆ, ಗೀತಾ–ಹೀಗೆ ನಾಲ್ಕು ಪ್ರಕಾರವಾಗಿ ನಡೆಯುತ್ತದೆ. ಗೀತೆಯಲ್ಲಿ ಹನ್ನೆರಡನೆ ಅಧ್ಯಾಯ ಎಲ್ಲಕ್ಕಿಂತ ತೀರ ಚಿಕ್ಕದು. ಅದರಲ್ಲಿ ಭಕ್ತನ ಲಕ್ಷಣಗಳು ಹೇಳ ಲ್ಪಟ್ಟಿವೆ. ಗಾಂಧೀಜಿಗೆ ಆ ಅಧ್ಯಾಯ ಬಹಳ ಪ್ರಿಯವಾದುದು. ಎರಡನೆ ಅಧ್ಯಾಯದ ತುದಿಯಲ್ಲಿ ಸ್ಥಿತಪ್ರಜ್ಞನ ಲಕ್ಷಣಗಳು ವರ್ಣಿತವಾಗಿವೆ. ಸ್ಥಿತ ಪ್ರಜ್ಞ ಎಂದರೆ ಯಾರು, ಅವನ ರೀತಿ ಹೇಗೆ ಎಂದು ಅರ್ಜುನ ಕೇಳುತ್ತಾನೆ. ಅದಕ್ಕೆ ಭಗವಾನ್ ಕೃಷ್ಣ ಉತ್ತರ ಕೊಡುತ್ತ ಮನುಷ್ಯನ ಧ್ಯೇಯವೇನೆಂಬು ದನ್ನು ಅದಕ್ಕೆ ಸಾಧನ ಮಾರ್ಗವೇನೆಂಬುದನ್ನು ಹೇಳುತ್ತಾನೆ. ಸದಾ ಕಾಲಕ್ಕೂ ಸಾಧಕಜೀವಕ್ಕೆ ಅದು ಕೈ ದೀವಿಗೆಯಂತೆ ಬೆಳಗುತ್ತಿರುತ್ತದೆ. ಆಶ್ರಮದ ದಿನದ ಪ್ರಾರ್ಥನೆಯಲ್ಲಿ ಈ ಅಧ್ಯಾಯಕ್ಕೆ ಬಹಳ ಮಹತ್ವವಿದೆ. ದಿನವೂ ಮಾನವನ ಜೀವನದ ಶ್ರೇಷ್ಠ ಆದರ್ಶವನ್ನು ಅದು ಸ್ಪಷ್ಟವಾಗಿ, ಸ್ಥೂಲವಾಗಿ ಅರ್ಥವಾಗುವಂತೆ ಚಿತ್ರಿಸಿ ಕಣ್ಣಮುಂದೆ ನಿಲ್ಲಿಸುತ್ತದೆ. ಗೀತೆಯ ಬಗ್ಗೆ ಗಾಂಧೀಜಿಗೆ ಇರುವ ಅಪಾರ ವಿಶ್ವಾಸಕ್ಕೆ ಇದೊಂದು ಗುರುತು. ಇದಲ್ಲದೆ 'ರಾಮಧುನ್'–ರಘುಪತಿ ರಾಜಾರಾಮ ಎಂದು ಹೆಸರಾದ ರಾಮ ಭಜನೆ–ಕೂಡಾ ಪ್ರಾರ್ಥನೆಯಲ್ಲಿ ಮುಖ್ಯವಾದುದು. ಏಕಕಂಠದಿಂದ ಎಲ್ಲರೂ ರಾಮಭಜನೆ ಹಾಡುತ್ತಿರುವಾಗ ಮನಸ್ಸಿಗೆ ಒಂದು ಬಗೆಯ ಅಪೂರ್ವ ಆನಂದವಾಗುತ್ತದೆ. ಅನೇಕ ಕಡೆ ನಾವು ನೋಡುವ ಶನಿವಾರದ ರಾಮ

ಭಜನೆಗಳಲ್ಲಿ ಕಾಣುವ ಹುಚ್ಚು ಹುಚ್ಚು ಪ್ರಲಾಪ ಇಲ್ಲಿ ಕಾಣಬರುವುದಿಲ್ಲ. ತಾಳ ಕುಟ್ಟಿ ಮನಸ್ಸನ್ನು ರೊಚ್ಚಿಗೆಬ್ಬಿಸುವುದಿಲ್ಲ. ಶಾಂತವಾಗಿ ಸಮಾಧಾನವಾಗಿ ಆ ಎರಡು ಪದಗಳನ್ನೂ ಮೆಲಕು ಹಾಕುತ್ತಾರೆ. ಉಳಿದ ಕೀರ್ತನೆಗಳೂ ಬಹು ಗಂಭೀರವಾದವು. ಗುಜರಾಥ, ರಾಜಪುತಾನಗಳಲ್ಲಿ ಆಗಿಹೋದ ಭಕ್ತಶ್ರೇಷ್ಠರ ಪದಾವಲಿಗಳಿಂದ ಸಂಗ್ರಹಿಸಿದವು. 'ವೈಷ್ಣವ ಜನತೋ ತೇನೆ ಕಹಿಯೆ' ಎಂಬ ಹಾಡೂ, 'ಮೇರಿ ಲಾಜ್' ಎಂಬ ತುಲಸೀದಾಸರ ಗೀತವೂ ಗಾಂಧೀಜಿಯ ಕರ್ನಾಟಕ ಪ್ರವಾಸದಲ್ಲಿ–ಮೈಸೂರು ವಾಸದಲ್ಲಿ–ಎಲ್ಲರಿಗೆ ಪರಿಚಿತವಾಗಿವೆ.

ಮೇಲೆ ನೀಲಾಕಾಶ, ಅಸಂಖ್ಯ ತಾರಾಗಣ. ಕೆಳಗೆ ಅಕೃತ್ರಿಮಳಾದ ನೆಲದಾಯಿ. ಮೂರೂ ಸಂಜೆಯ ನಸುಕು. ಮಾನವ ಲೋಕದ ಆತ್ಮಸರಸ್ಸು ಭಗವಾನನ ಪೀಠದ ಕಡೆಗೆ–ಆಕಾಶದ ಕಡೆಗೆ–ಚಿಮ್ಮುತ್ತಿದೆಯೋ ಎನಿಸುತ್ತದೆ, ಈ ಭಜನೆಯ ಧ್ವನಿ ಮೇಲೇರುತ್ತಿದ್ದರೆ.

ಗಾಂಧೀಜೀ ಪ್ರಾರ್ಥನೆಯಲ್ಲಿ ಮಾತಾಡುವುದಿಲ್ಲ. ಸಾಬರ್ಮತಿಯಲ್ಲಿದ್ದಾಗ ಪ್ರಾರ್ಥನೆಯಾದ ಕೂಡಲೇ ಅವರ ಪ್ರವಚನವಾಗುತ್ತಿತ್ತು. ಸೇವಾಗ್ರಾಮದಲ್ಲಿ ಈಗ ಆ ರೂಢಿಯಿಲ್ಲ. ನಿಜವಾಗಿ ನೋಡಿದರೆ ಸೇವಾಗ್ರಾಮ ಆಶ್ರಮಕ್ಕೂ ಸಾಬರ್ಮತಿಗೂ ಬಹಳ ವ್ಯತ್ಯಾಸವಿದೆ. ಅದು ಒಂದು ಶಿಕ್ಷಣ ಸಂಸ್ಥೆ. ಸತ್ಯಾಗ್ರಹ ಸಿದ್ಧಾಂತವನ್ನು ಆಶ್ರಮವಾಸಿಗಳಿಗೆ ಕಲಿಸುವ ಹೊಣೆಯನ್ನು ಗಾಂಧಿಜೀ ಹೊರುತ್ತಿದ್ದರು. ಅಲ್ಲಿದ್ದವರು ಶಿಕ್ಷಣ ಪಡೆಯುತ್ತಿದ್ದ ಶಿಷ್ಯವೃಂದ. ಇದು ಅವರ ಪರ್ಣಶಾಲೆ. ಅವರಿಗೆ ಅನಿವಾರ್ಯವಾಗಿ ಬೇಕಾದ ನಾಲ್ಕೆಂಟು ಜನ ಮಾತ್ರ ಇಲ್ಲಿ ಇದಾರೆ ಪ್ರಾರ್ಥನೆಯಲ್ಲಿ ಎಲ್ಲರ ನಡುವೆ ಕೂತರೂ ಗಾಂಧೀಜೀ ಮೌನವಾಗಿರುತ್ತಾರೆ. ಎಲ್ಲರೊಡನೆ ಶ್ಲೋಕಾದಿಗಳನ್ನು ಹೇಳುವುದಿಲ್ಲ. ಅವರು ಅಲ್ಲಿರುವುದೇ ಪ್ರಾರ್ಥನೆಗೆ ಒಂದು ಶ್ರುತಿ ಕೊಡುತ್ತದೆ. ಅದನ್ನು ಒಂದು ಮಟ್ಟಕ್ಕೆ ತರುತ್ತದೆ.

ನಮ್ಮ ಸಂಸ್ಕೃತಿಯಲ್ಲಿ ಈ ರೀತಿಯಾದ ಸಾಮೂಹಿಕ ಪ್ರಾರ್ಥನೆ ಬಹಳ ಕಡಮೆ. ಉತ್ತರ ದೇಶದಲ್ಲಿ ಭಕ್ತಿಮಾರ್ಗದ ಬೇರೆ ಬೇರೆ ಪಂಥಗಳು ಸಾಮೂಹಿಕ ಭಜನೆ, ಕೀರ್ತನೆ ಮುಂತಾದ ಸಂಪ್ರದಾಯಗಳನ್ನು ಜನರಲ್ಲಿ ರೂಢಿಗೆ ತಂದಿವೆ. ಉತ್ತರ ಕರ್ನಾಟಕದಲ್ಲಿ ಅಲ್ಲಲ್ಲಿ 'ಜಯ

ವಿಠಲ' ಕುಣಿತಗಳು ಕಾಣುತ್ತವೆ. ಆದರೂ ಅದನ್ನು ನಮ್ಮ ಸಂಸ್ಕೃತಿಯ ಒಂದು ಭಾಗವೆನ್ನಲು ಬರುವಂತಿಲ್ಲ. ಅಲ್ಲದೆ ಆ ಕುಣಿತಕ್ಕೂ ಈ ಪ್ರಾರ್ಥನೆಗೂ ಬುಡದಲ್ಲೇ ಭೇದವಿದೆ. ಈ ತರದ ಸಾಮೂಹಿಕ ಪ್ರಾರ್ಥನೆ ಕ್ರಿಸ್ತಾನರಲ್ಲಿ, ಮಹಮ್ಮದೀಯರಲ್ಲಿ ಉಂಟು. ಮಹಮ್ಮದೀಯರ ಪ್ರಾರ್ಥನೆಯಲ್ಲಿ ಮುಲ್ಲಾ ಒಬ್ಬನೇ ಘೋಷಿಸುವವನು. ಉಳಿದವರು ಸಿಪಾಯಿಗಳಂತೆ ನಮಾಜು ಮಾಡುತ್ತಾರೆ. ಅದರಲ್ಲಿ ಒಂದು ಶಿಸ್ತು ಇದೆ. ಕ್ರಿಸ್ತಾನರ ಸಾಮೂಹಿಕ ಪ್ರಾರ್ಥನೆ ಹೆಚ್ಚು ಆನಂದಮಯ. ಗಾಂಧೀಜಿಗೆ ಇಂಗ್ಲೆಂಡಿನಲ್ಲಿ. ದಕ್ಷಿಣ ಆಫ್ರಿಕಾದಲ್ಲಿ ಈಶಾಯಿಗಳ ಸಹವಾಸ ಸ್ನೇಹಗಳು ಲಭಿಸಿದವು. ಅವರ ಅಂತರಂಗದ ಗೆಳೆಯರಲ್ಲಿ ಅನೇಕರು ಈಸಾಯಿಗಳು. ಈ ಸಹವಾಸದ ಪರಿಣಾಮದಿಂದ ಗಾಂಧೀಜಿಯ ಸಾಮೂಹಿಕ ಪ್ರಾರ್ಥನೆ ಬಂದಿರಬಹುದೆಂದು ಅನಿಸುತ್ತದೆ. ಅಂತೂ ಅವರ ಜೀವನದಲ್ಲಿ ಈ ಪ್ರಾರ್ಥನೆಗೆ ಬಹಳ ದಿನಗಳಿಂದ ಒಂದು ಮಹತ್ವದ ಸ್ಥಾನ ಬಂದಿದೆ. ಸಾಮೂಹಿಕ ಪ್ರಾರ್ಥನೆಯ ಪದ್ಧತಿ ನಮ್ಮಲ್ಲಿ ಹರಡಲಿ ಎಂದು ಅವರ ಬಯಕೆ. ಅದಕ್ಕಾಗಿಯೇ ಬಹಿರಂಗವಾಗಿ ಪ್ರಾರ್ಥನಾಸಭೆಗಳನ್ನು ಅವರು ನಡೆಸುವುದು.

ಸಂಜೆಗೆ ತಿರುಗಾಡಿ ಬಂದ ಕೂಡಲೆ ಪ್ರಾರ್ಥನೆ. ಪ್ರಾರ್ಥನೆ ಮುಗಿದ ಮೇಲೆ ಆಶ್ರಮದ ಮೇಲ್ವಿಚಾರಣೆ. ಯಾರು ಎಷ್ಟು ಎಷ್ಟು ಕೆಲಸ ಮಾಡಿದರು? ನೂಲುವುದು, ತೋಟದ ಕೆಲಸ ಎಷ್ಟು ನಡೆಯಿತು.? ಆಶ್ರಮದಲ್ಲಿ ಎಲ್ಲರೂ ಆರೋಗ್ಯವೆ? ಎಲ್ಲಾ ಸಣ್ಣ ಪುಟ್ಟ ಮಾತುಗಳನ್ನೂ ವಿಚಾರಿಸುತ್ತಾರೆ. ಆಶ್ರಮವಾಸಿಗಳಲ್ಲಿ ಯಾರಾದರೂ ಬೇನೆ ಬಿದ್ದರೆ ಗಾಂಧೀಜಿಗೆ ಬಹಳ ಚಿಂತೆ. ತಾವೇ ಉಪಚಾರಕ್ಕೆ ನಿಲುತ್ತಾರೆ. ಪ್ರಾರ್ಥನೆಯ ತರುವಾಯ ರೋಗಿಗಳ ಬಳಿ ಹೋಗಿ ಕುಳಿತು ಅವರನ್ನು ಉಲ್ಲಾಸಗೊಳಿಸುತ್ತಾರೆ. ಗಾಂಧೀಜೀ ಸ್ವಲ್ಪ ವೈದ್ಯವನ್ನೂ ಬಲ್ಲರು. ಮರಪಂಡಿತರಂತೆ ಅರೆವೈದ್ಯರ ಜಾತಿ ಬಂದಿದೆ. ಆ ಗುಂಪಿಗೆ ಸೇರಿದವನು ನಾನು ಎಂದು ಅವರು ಹೇಳುತ್ತಾರೆ. ಮೊದ ಮೊದಲು ಅವರ ವೈದ್ಯಶಾಸ್ತ್ರ ಪ್ರಯೋಗಗಳು ಅವರ ಸುತ್ತಲಿನ ಜನರಿಗೆ ಹೆದರಿಕೆ, ಬೇಸರ ಉಂಟು ಮಾಡುವಷ್ಟು ವಿಚಿತ್ರವಾಗಿದ್ದವು. ಅವರ ಮಣ್ಣಿನ ಚಿಕಿತ್ಸೆ, ನೀರಿನ ಚಿಕಿತ್ಸೆ–ಮುಂತಾದವುಗಳ ಬಗ್ಗೆ

ಕಥೆಗಳೇ ಇವೆ. ಆದರೆ ಈಗ ಆ ಪ್ರಯೋಗಗಳಿಗೆ ಬೇಕಾದ ವಿರಾಮ ವಾಗಲಿ ಉತ್ಸಾಹವಾಗಲಿ ಎರಡೂ ಇಲ್ಲ. ಆಶ್ರಮದಲ್ಲಿ ಸಣ್ಣದೊಂದು ಔಷಧಾಲಯವಿದೆ. ಡಾ. ಸುಶೀಲಾ ನಾಯರ್ ಅದನ್ನು ನೋಡಿಕೊಳ್ಳು ತ್ತಾಳೆ.

ಇಷ್ಟೆಲ್ಲಾ ಆಗುವ ಹೊತ್ತಿಗೆ ೯ ಘಂಟೆ. ಅದು ಗಾಂಧೀಜೀ ಮಲಗುವ ಹೊತ್ತು. ಗಾಂಧೀಜೀ ರಾತ್ರಿ ಬೇಗನೆ ಮಲಗುತ್ತಾರೆ. ೩೦—೪೦ ವರ್ಷಗಳಿಂದ ಅವರಿಗೆ ಈ ರೂಢಿ ಇದೆ. ಬೆಳಿಗ್ಗೆ ೪ ಕ್ಕೆ ಏಳು ತ್ತಾರೆ. ಗಾಂಧೀಜಿಯ ಮೇಲ್ವಿಚಾರಣೆಗೆ ಒಳಪಟ್ಟ ಎಲ್ಲಾ ಸಂಸ್ಥೆಗಳಲ್ಲೂ ಇದೊಂದು ನಿಯಮವಾಗಿದೆ. ಅರುಣೋದಯಕ್ಕೆ ಮೊದಲೇ ಏಳುವುದು ಅವರಿಗೆ ಮುಖ್ಯವಾದ ಒಂದು ಜೀವನ ಧರ್ಮ. ಈ ಮುದಿತನದಲ್ಲಿ ಅವರಿಗಿರುವ ಕಾರ್ಯಕಲಾಪಗಳ ನಡೆವೆಯೂ ಅವರ ಆರೋಗ್ಯ ಈಗಿರುವಷ್ಟು ಚೆನ್ನಾಗಿರಲು ಈ ಅಭ್ಯಾಸವೂ ಒಂದು ಕಾರಣವೆಂದು ಸುಲಭವಾಗಿ ತಿಳಿಯ ಬಹುದಾಗಿದೆ.

ಗಾಂಧೀಜಿಯ ಪರ್ಣಕುಟಿಗೆ ಬಲ ಮಗ್ಗುಲಿನಲ್ಲಿ ಸ್ವಲ್ಪ ಚಪ್ಪರವಿದೆ. ಮಳೆಗಾಲದಲ್ಲಿ ಗಾಂಧೀಜೀ ಆ ಚಪ್ಪರದ ಕೆಳಗೆ ಮಲಗುತ್ತಾರೆ. ಒಂದು ಸಾಮಾನ್ಯವಾದ ಹೊರಸು ಅವರ ಶಯ್ಯಾಸಾಧನ. ಮಳೆಯಿಲ್ಲದಿದ್ದರೆ ಕುಟಿಯ ಮುಂದಿನ ಬಯಲಲ್ಲಿ ಮಲಗುತ್ತಾರೆ. ಒಳಗೆ ಮಾತ್ರ ಎಂದೂ ಮಲಗುವುದಿಲ್ಲ. ಎಷ್ಟೇ ಛಳಿಯಿರಲಿ ಗಾಳಿಯಿರಲಿ, ಬಯಲಿನಲ್ಲಿ ನಕ್ಷತ್ರಗಳ ಬೆಳಕಿನಲ್ಲೇ ಮಲಗುತ್ತಾರೆ. ಬ್ರಹ್ಮಚರ್ಯ, ಆರೋಗ್ಯಗಳಿಗೆ ಈ ಪದ್ಧತಿ ಗಾಂಧೀಜಿಗೆ ಬಹಳ ನೆರವಾಗಿರಬೇಕು. ಇದರಿಂದ ಗುಪ್ತಚಾರರ ಭಯ, ಸಾಮಾಜಿಕ ಕುಹಕಿಗಳ ಗೊಂದಲ ತಪ್ಪಿತು, ಗಾಂಧೀಜಿಯ ಜೀವನವು ಸರಳವಾಯಿತು, ಎಂದಿದಾರೆ ಮಹದೇವ ದೇಸಾಯಿ. ತಮ್ಮ ಬಾಳಿನಲ್ಲಿ ಮುಚ್ಚುಮರೆ ಇರಬಾರದೆಂಬ ನಿಯಮವೇ ಅವರನ್ನು ಗುಪ್ತಚಾರರಿಂದ ನಿರ್ಭೀತರನ್ನಾಗಿ ಇಟ್ಟಿದೆ. 'ಆಡಿ ಮಾಡುವುದು' ಮಧ್ಯಮವೆಂದು ಸರ್ವಜ್ಞ ಹೇಳಿದಾನೆ. ಆದರೆ ಗಾಂಧೀಜೀ ತಮ್ಮ ರಾಜಕೀಯ ಜೀವನದಲ್ಲಿ 'ಆಡದೇ ಮಾಡುವುದಿಲ್ಲ'ವೆಂದು ಹಟ ತೊಟ್ಟಿದಾರೆ. ಸಮಾಜದ ಕುಹಕಿಗಳ ಮಾತು ನಡುಹಗಲಿನಲ್ಲಿ ಕಣ್ಣು ಮುಚ್ಚಿ ಕತ್ತಲು ಎಂದಂತೆ.

ತಮ್ಮ ಮನಸ್ಸಿನಲ್ಲಿದ್ದುದ್ದನ್ನೆ ಸುತ್ತಲು ಕಾಣುವ ಪ್ರತಿಭಾವಂತರು ಅವರು. ಅವರಿಗೆ ಯಾವದೂ ಅಡ್ಡವಲ್ಲ. ಯಾವುದು ಹೇಗಾದರೂ ಇರಲಿ. ಗಾಂಧೀಜಿಯ ಆರೋಗ್ಯ, ದಾರ್ಢ್ಯ, ಬ್ರಹ್ಮಚರ್ಯಗಳಿಗೆ ಈ ರೂಢಿ ಬಹಳ ಸಹಾಯಕಾರಿಯಾಗಿದೆ. ಬ್ರಹ್ಮಚರ್ಯದ ಮಾತು ಬಂದಾಗೆಲ್ಲ ಬಯಲಲ್ಲಿ ಮಲಗುವ ಸೂಚನೆಯನ್ನು ಅವರು ಕೊಡುವದುಂಟು.

ಮುಂಜಾನೆ ೪ ಗಂಟೆಗೆ ಆಶ್ರಮದಲ್ಲಿ ಎಲ್ಲರೂ ಏಳುತ್ತಾರೆ. ಮೋರೆ ತೊಳೆದುಕೊಂಡು ಎಲ್ಲರೂ ಪ್ರಾರ್ಥನೆಗಾಗಿ ಅಂಗಳದಲ್ಲಿ ಸೇರುತ್ತಾರೆ. ಒಮ್ಮೊಮ್ಮೆ ರಾತ್ರಿ ಇನ್ನೂ ಮುಂಚೆಯೇ ಎದ್ದು ಗಾಂಧೀಜೀ ಪತ್ರವ್ಯವಹಾರ ವನ್ನು ನೋಡಿಕೊಳ್ಳುವುದುಂಟು. ಅರ್ಧಗಂಟೆ ಪ್ರಾರ್ಥನೆ ಮುಗಿದ ಮೇಲೆ ಪ್ರಾತರ್ವಿಧಿ; ಪ್ರಾತರ್ವಿಧಿಯಾದ ಮೇಲೆ ಮುಂಜಾನೆಯ ಗಾಳಿ ಸವಾರಿ. ಮುಂಜಾನೆ ಆಶ್ರಮದ ಜನವಲ್ಲದೆ ಬೇರೆ ಯಾರೂ ಇರುವುದಿಲ್ಲ. ವರ್ಧಾ ದಲ್ಲಿ ಕಾಂಗ್ರೆಸ್ ವರ್ಕಿಂಗ್ ಕಮಿಟಿ ಸೇರಿದಾಗ ಹೊರಗಿನಿಂದ ಹೆಸರಾದ ಪತ್ರಿಕೆಗಳ ಸುದ್ದಿಗಾರರು ಬರುತ್ತಾರೆ. ಅವರಲ್ಲಿ ಒಬ್ಬರಿಬ್ಬರು ಮುಂಜಾನೆ ಸೇವಾಗ್ರಾಮಕ್ಕೆ ಹೋಗಿ ಪ್ರಾರ್ಥನೆಯಲ್ಲಿ ಸೇರಿ, ಗಾಂಧೀಜಿಯ ಜೊತೆಯಲ್ಲಿ ಅಡ್ಡಾಡುತ್ತ ವರ್ಧಾಕ್ಕೆ ಹಿಂದಿರುಗುತ್ತಾರೆ.

ಅಲ್ಲಿಗೆ ೬-೩೦ ಗಂಟೆಯಾಗುತ್ತದೆ. ಅದು ಗಾಂಧೀಜಿಗೆ ಬೆಳಗಿನ ಉಪಾಹಾರದ ಸಮಯ. ಸಂಜೆಯಂತೆಯೆ ಮುಂಜಾನೆ. ಅದೇ ಆಹಾರ. ಮಧ್ಯಾಹ್ನ ೧೧ ಗಂಟೆಗೆ ಮತ್ತೊಮ್ಮೆ ಆಹಾರ ತೆಗೆದುಕೊಳ್ಳುತ್ತಾರೆ. ಆಗಲೂ ಅದೇ. ಕಸ್ತೂರಿಬಾ ಸ್ವಯಂ ಕೂತು ಭೋಜನಮಾಡಿಸುತ್ತಾರೆ. ಅವರು ಊರಲ್ಲಿರದಿದ್ದರೆ ಮೀರಾಬಾಯಿಯು ಕೆಲಸ ಅದು.

ಮೀರಾಬಾಯಿ (ಬೇನ್) ಒಬ್ಬ ವಿಚಿತ್ರವ್ಯಕ್ತಿ. ಹುಟ್ಟು ಇಂಗ್ಲೀಷ ಜಾತಿಯಲ್ಲಿ. ಈಗಲೂ ಅವರ ಕ್ರಿಶ್ಚಿಯನ್ ಧರ್ಮವನ್ನು ಬಿಟ್ಟಿಲ್ಲ. ಆದರೂ ಹಿಂದೂ ಧರ್ಮದ ಕಡೆಗೆ-ಗಾಂಧೀಜಿಯ ಹಿಂದೂ ಧರ್ಮದ ಕಡೆಗೆ-ಪೂರಾ ಒಲವು. ಇಂಗ್ಲೆಂಡಿನ ಒಬ್ಬ ಶ್ರೀಮಂತ ಅಡ್ಮಿರಲ್—ನೌಕಾದಳದ ಅಧಿಕಾರಿ—ನ ಮಗಳು. ಅಲ್ಲಿದ್ದಾಗಲೂ ಸಾತ್ವಿಕ ಜೀವಿ. ಸಮಾಜ ಸೇವೆ ಯಲ್ಲಿ ನಿರತಳಾಗಿದ್ದಳು. ಗಾಂಧೀಜಿಯ ಜೀವನ-ಸಿದ್ಧಾಂತಗಳಿಗೆ ಮನ ಸೋತು ಅವರ ಬಳಿಗೆ ಬಂದಳು. ಅದಕ್ಕಾಗಿ ಇಂಗ್ಲೆಂಡನ್ನೂ ಆಸ್ತಿ

ಯನ್ನೂ, ಆ ಸುಖವಿಲಾಸಗಳನ್ನೂ ತ್ಯಾಗಮಾಡಬೇಕಾಯ್ತು. ಆಕೆ ಹೆದರಲಿಲ್ಲ. ಹಿಂದುಸ್ಥಾನಕ್ಕೆ ಬಂದಳು. ಆಶ್ರಮದ ವ್ರತಗಳನ್ನು ಸ್ವೀಕರಿಸಿದಳು. ಆದರೂ ಆಕೆಗೆ ಹಿಂದುಸ್ಥಾನದ ಶ್ರುತಿ ಸಿಕ್ಕಂತಾಗಲಿಲ್ಲ ಸನ್ಯಾಸಿನಿಯರಂತೆ ತಲೆ ಬೋಳಿಸಿಬಿಟ್ಟಳು. ತನ್ನ ಗುರುವಿನಂತೆ ತುಂಡು ಸೀರೆಯೊಂದನ್ನು ಮೊಣಕಾಲವರೆಗೆ ಉಡುತ್ತಾಳೆ. ಸದಾ ಏನಾದರೊಂದು ಕೆಲಸ ಮಾಡುವ ಕರ್ಮಜೀವಿ. ಚರಖಾದಲ್ಲಿ ನೈಪುಣ್ಯ ಪಡೆದಿದಾಳೆ. ಆಕೆಯ ಮುಖ್ಯ ಧ್ಯೇಯ ಗುರುಶುಶ್ರೂಷೆ. ಯಾವ ರಾಜಕೀಯ ಗೊಂದಲದಲ್ಲೂ ಆಕೆ ತಲೆ ಹಾಕಳು.

ಊಟವಾದ ಮೇಲೆ ಪ್ಯಾರೆಲಾಲರ ಪ್ರವೇಶ. ಅವರ ಹಿಂದೆಯೆ ಗುಡಿಸಲು ತುಂಬ ಕಾಗದ ಪತ್ರಗಳು ಬಂದುಬಿಡುತ್ತವೆ. ಹಿಂದಿನ ದಿನದ ಪತ್ರಿಕೆಗಳಲ್ಲಿ ಬಂದ ಅಗ್ರಲೇಖಗಳನ್ನು ಓದಿ ತೋರಿಸುತ್ತಾರೆ. ಹಿಂದುಸ್ಥಾನದ ಅಥವಾ ಅಂತರ್ಜಾತೀಯ ರಾಜಕಾರಣಕ್ಕೆ ಸಂಬಂಧಪಟ್ಟವಾದರೆ ಓದುವುದು. ಇಲ್ಲವಾದರೆ ಇಲ್ಲ. ಎಲ್ಲ ಪತ್ರಿಕೆಗಳಿಗಿಂತ ಮುಖ್ಯವಾದ ಸ್ಥಾನ ಟೈಮ್ಸ್ ಆಫ್ ಇಂಡಿಯಾಕ್ಕೆ. ವಿರೋಧಪಕ್ಷದ ವಿಮರ್ಶೆಯನ್ನು ತಿಳಿಯಲು ಗಾಂಧೀಜೀ ಬಹಳ ಕುತೂಹಲ ತೋರಿಸುತ್ತಾರೆ. ಅನೇಕ ಸಲ ಅದರಲ್ಲಿ ಬರುವ ವಿಮರ್ಶೆಯನ್ನು ನೋಡಿ ಮೆಚ್ಚಿಕೊಳ್ಳುತ್ತಾರೆ. ಕಲಕತ್ತೆಯ ಸ್ಟೇಟ್ಸ್‌ಮನ್ ಕೂಡಾ ಅವರ ಪಟ್ಟೆಯಲ್ಲಿದೆ. ಸುಭಾಷಚಂದ್ರರ ಪ್ರಕರಣ ಹಿಂದುಸ್ಥಾನದ ರಾಜಕೀಯವನ್ನು ಕದಡಿದ ಮೇಲೆ ಕಲಕತ್ತೆಯ ಒಂದೆರಡು ಪತ್ರಿಕೆಗಳೂ ಆಗಾಗ ಓದಲ್ಪಡುತ್ತವೆ. ಆದರೆ ರಾಷ್ಟ್ರೀಯ ಪತ್ರಿಕೆಗಳೆಂದು ಹಿಂದುಸ್ಥಾನದಲ್ಲಿ ಪ್ರಕಟವಾಗುವ ಪತ್ರಿಕೆಗಳನ್ನು ಅವರು ಮುಟ್ಟುವುದೇ ಇಲ್ಲ.

ಪತ್ರಿಕೆಗಳಿಂದ ಪತ್ರವ್ಯವಹಾರಕ್ಕೆ ಸಾಗುತ್ತದೆ ದಿನಚರಿ. ಭಾರತದ ಎಲ್ಲ ಮೂಲೆಗಳಿಂದಲೂ ಕಾಗದಗಳು ಬರುತ್ತವೆ. ಸಂದರ್ಶನಕ್ಕೆ ಬರುವ ಜನರಲ್ಲಿ ಎಷ್ಟು ವೈವಿಧ್ಯವೋ ಇದರಲ್ಲೂ ಅಷ್ಟೇ. ಆತ್ಮೀಯ, ರಾಜಕೀಯ, ಸಾಮಾಜಿಕ, ಶೈಕ್ಷಣಿಕ, ಧಾರ್ಮಿಕ—ಎಲ್ಲ ತರದ ಜನರೂ ಪತ್ರ ಬರೆಯುತ್ತಾರೆ. ಒಂದು ಕಡೆ ಧರ್ಮಸಂದೇಹ ಪರಿಹರಿಸಬೇಕು. ಇನ್ನೊಂದರಲ್ಲಿ ಕಾಂಗ್ರೆಸ್ಸಿನ ಅಧಿಕಾರಿಗಳ, ಮಂತ್ರಿಗಳ ಲೋಪಗಳನ್ನು ವಿಚಾರಣೆ ಮಾಡ

ಬೇಕು. ವರ್ಧಾವಿಧಾನದ ಬಗ್ಗೆ ಆಕ್ಷೇಪಣೆಗಳ ಪತ್ರಗಳೂ ಬರುತ್ತವೆ. ಹರಿಜನದಲ್ಲಿ ಬಂದ ಅವರ ಲೇಖನಗಳ ವಿಮರ್ಶೆ, ಸಂಸ್ಥಾನಗಳಲ್ಲಿ ಅತ್ಯಾಚಾರದ ವರದಿ, ನಡುನಡುವೆ ಆತ್ಮೀಯ ಸಮಸ್ಯೆಗಳು. ಪತ್ರಗಳದೊಂದು ಗುಡ್ಡೆಯೇ ಬೀಳುತ್ತದೆ ಪ್ರತಿದಿನ. ಅದೊಂದು ಸಂತೆ ನೆರೆಸಿದ ಹಾಗೆ.

ಅನೇಕ ಪತ್ರಗಳಿಗೆ ಉತ್ತರವನ್ನು ಕೂಡಲೇ ಬರೆಸಿಬಿಡುತ್ತಾರೆ. ತಾವೇ ಬರೆದುಬಿಡುವುದೂ ಉಂಟು. ಮುಖ್ಯವಾದ, ಆಲೋಚಿಸಿ ಉತ್ತರ ಕೊಡಬೇಕಾದ, ಪತ್ರಗಳನ್ನು ಮಾತ್ರ ತೆಗೆದಿಡುತ್ತಾರೆ. ಕೆಲವು ಪತ್ರಗಳನ್ನು ಆಯಾ ಜನರಿಗೆ ಕಳಿಸಿಕೊಡುತ್ತಾರೆ. ವರ್ಧಾ ಶಿಕ್ಷಣದ ಬಗ್ಗೆ ಇದ್ದರೆ ಅದು ಆರ್ಯನಾಯಕಂ ಬಳಿಗೆ. ಗ್ರಾಮೋದ್ಯೋಗದ ವಿಷಯವಾದರೆ ಕುಮಾರಪ್ಪನವರಿಗೆ. ಹೀಗೆ ಹೊರೆಯನ್ನು ಎಷ್ಟೇ ಕಡಮೆ ಮಾಡಿದರೂ ದಿನದಿನದ ಪತ್ರವ್ಯವಹಾರವನ್ನು ಆಯಾ ದಿನವೇ ಮುಗಿಸುವುದಾಗದು. ಪ್ಯಾರೆಲಾಲರು ಓದುತ್ತಿದ್ದರೆ ಗಾಂಧೀಜೀ ನೂಲುತ್ತಾ ಕೇಳುತ್ತಾರೆ. ಇಲ್ಲವೆ ಸಾಮಾನ್ಯ ಪತ್ರಗಳ ಉತ್ತರ ಬರೆಯುತ್ತಾರೆ. ಊಟ ನಡೆದಾಗಲೂ ಈ ಕೆಲಸ ನಡೆದಿರುತ್ತದೆ.

೧೦ ಗಂಟೆಯ ಹೊತ್ತಿಗೆ ಬಚ್ಚಲು ಮನೆಯ ಕಡೆಗೆ ಹೋಗುತ್ತಾರೆ. ಗಾಂಧೀಜಿಯ ಸ್ನಾನವೊಂದು ದೊಡ್ಡ ಅಧ್ಯಾಯ. ಜರ್ಮನಿಯ ಕೂನ್ ಸಾಹೇಬನ ಜಲೌಷಧಿಯನ್ನು ನಂಬಿದಾಗಿನಿಂದ ಅವರು ತೊಟ್ಟಿಯ ಸ್ನಾನವನ್ನು ಅವಲಂಬಿಸಿದಾರೆ. ತೊಟ್ಟಿಯ ಸ್ನಾನಕ್ಕೆ ಸಹಜವಾಗಿಯೇ ಬಹಳ ಹೊತ್ತು ಹಿಡಿಯುತ್ತದೆ. ಗಾಂಧೀಜೀ ಅದನ್ನು ಇನ್ನೂ ಬೆಳಸಿ ಬಿಟ್ಟಿದಾರೆ. ಗಳಿಗೆಯೂ ವಿರಾಮವಿಲ್ಲದ ತಮ್ಮ ಕರ್ಮ ಜೀವನದಿಂದ ವಿಶ್ರಾಂತಿ ಹೊಂದುವ ಸಾಧನೆಯಾಗಿ ಮಾಡಿಕೊಂಡಿದಾರೆ ಸ್ನಾನವನ್ನು. ಸಾಧಾರಣವಾಗಿ ಒಂದು ಗಂಟೆಗೆ ಕಡಮೆಯಿಲ್ಲದೆ ಅವರು ಬಚ್ಚಲುಮನೆಯಿಂದ ಹೊರಗೆ ಬರುವುದಿಲ್ಲ. ತೊಟ್ಟಿಯಲ್ಲಿ ಸುಖವಾಗಿ ಮಲಗಿಬಿಡುತ್ತಾರೆ. ಒಮ್ಮೊಮ್ಮೆ ಹಾಗೇ ಹಾಯಾಗಿ ನಿದ್ದೆ ಹೋಗುವುದೂ ಉಂಟು. ಶುಭ್ರವಾದ ಕಣ್ಣೀರಿನಲ್ಲಿ ಹಾಗೇ ಮಲಗಿ ಮುಖ್ಯವಾದ ಕಾಗದ ಪತ್ರಗಳನ್ನು ಕೆಲವು ಸಲ ಓದಿಕೊಳ್ಳುತ್ತಾರೆ. ಕೆಲವು ಪುಸ್ತಕ, ಓದಲೇಬೇಕಾದವಾದರೂ ಅವನ್ನು ಓದಲು ಅವರಿಗೆ ಸಮಯವೇ ದೊರೆಯದು. ಅಂಥವನ್ನು

ಬಚ್ಚಲು ಮನೆಯ ಏಕಾಂತದಲ್ಲಿ ಓದಿಕೊಳ್ಳುತ್ತಾರೆ. 'ರಾಷ್ಟ್ರಪತಿಯಂಥವನನ್ನೂ ಕೂಡಾ ಹೊರಗೆ ಹಾದಿ ಕಾಯಲು ಬಿಟ್ಟು ಸ್ನಾನಗೃಹದಲ್ಲಿರಬಲ್ಲರು ಅವರು' ಎಂದು ಮಹಾದೇವ ದೇಸಾಯಿ ಹೇಳಿದ್ದಾರೆ. ಹಾಗೆ ಆಗದೆ ಇಲ್ಲ. 'ಈ ನಡುವೆ ಸ್ವಲ್ಪ ಏಕಾಂತ–ವಿಶ್ರಾಂತಿ ದೊರಕಿಸಲು ಇದೊಂದೇ ಪರಿಣಾಮಕಾರಿಯಾದ ಉಪಾಯವಾಗಿದೆ' ಎಂದಿದ್ದಾರೆ. ನಿಜ. ನಿಜವಾಗಿ ಏಕಾಂತವೆಂದರೆ ಸ್ನಾನವೇ ಅವರ ಏಕೈಕ ಸಾಧನೆ.

ಸ್ನಾನವಾದ ಮೇಲೆ ಮತ್ತೊಮ್ಮೆ ಆಹಾರ. ಅದಾದ ಮೇಲೆ ತುಸು ಹೊತ್ತು ನಿದ್ದೆ ಮಾಡುತ್ತಾರೆ. ಅಲ್ಲಿಂದ ನೂಲುವುದು, ಸಂದರ್ಶನಗಳು. ಮತ್ತೆ ದಿನ ಚಕ್ರ ಮೊದಲಾಗುತ್ತದೆ.

ಇತ್ತೀಚೆಗೆ ರಕ್ತದ ವೇಗ ಹೆಚ್ಚಾಗಿ ಸ್ನಾನಕ್ಕೆ ಮೊದಲು ಅರ್ಧ ಗಂಟೆಯ ಹೊತ್ತು ಮೈ ತಿಕ್ಕಬೇಕಾಗುತ್ತದೆ. ಮಧ್ಯಾಹ್ನವಾದಂತೆ ನುಣ್ಣನೆ ಮಣ್ಣನ್ನು ನೆನೆಯಿಸಿ, ಬಟ್ಟೆಯಲ್ಲಿ ಸಮವಾಗಿ ಹರಡಿ ತಲೆಗೆ ಕಟ್ಟಬೇಕಾಗುತ್ತದೆ. ಈ ಪಟ್ಟನ್ನು (ಪೌಲ್ಟೀಸು) ಬೇಗೆ ಹೆಚ್ಚಾದಂತೆ ಎರಡು ಮೂರು ಸಲ ಬದಲಾಯಿಸಬೇಕಾಗುತ್ತದೆ.

ಭಾನುವಾರ, ಸೋಮವಾರ ಗಾಂಧೀಜಿಯ ದಿನಚರಿಯಲ್ಲಿ ಸ್ವಲ್ಪ ವ್ಯತ್ಯಾಸವಾಗುತ್ತದೆ. ಭಾನುವಾರ ಬೆಳಿಗ್ಗೆ, ಅನುಕೂಲವಾದರೆ ಮಧ್ಯಾಹ್ನ "ಹರಿಜನ" ಪತ್ರಿಕೆಗೆ ಲೇಖನಗಳನ್ನು ಬರೆಯುತ್ತಾರೆ. ಅತ್ಯಗತ್ಯವಲ್ಲದಿದ್ದರೆ ಭಾನುವಾರ ಭೇಟಿಗಳಿಗೆ ಅವಕಾಶವಿಲ್ಲ. ಸೋಮವಾರವೆಲ್ಲ ಮೌನದಲ್ಲೇ ಹೋಗುತ್ತದೆ. ಭಾನುವಾರ ರಾತ್ರಿ ಪ್ರಾರ್ಥನೆಯನಂತರ ಮೌನಧಾರಣೆ ಮಾಡಿದವರು ೨೪ ಗಂಟೆಯ ಮೇಲೆ ಸೋಮವಾರ ಸಂಜೆಯಾದಮೇಲೆ ಮಾತಾಡುತ್ತಾರೆ. ಅಲ್ಲಿಯವರೆಗೆ ಮಾತಿಲ್ಲ. ಮೊದಮೊದಲು ಈ ಮೌನವ್ರತವು ಯಂಗ್ ಇಂಡಿಯಾ ಪತ್ರಿಕೆಯ ಲೇಖನಗಳನ್ನು ಬರೆಯಲು ಉಪಯೋಗವಾಗುತ್ತಿತ್ತು. ಈಗಲೂ ಹರಿಜನದ ಕೆಲಸವಿರುತ್ತದೆ. ಅವಿಶ್ರಾಂತವಾದ ಸಂಭಾಷಣೆ, ಚರ್ಚೆಗಳ ಬಲೆಯಿಂದ ಮುಕ್ತರಾಗಿರಲು ಇದೊಂದು ಒಳ್ಳೆ ಹಾದಿಯೇ ಸರಿ.

ರಾಮೇಶ್ವರಕ್ಕೆ ಹೋದರೂ ಶನೀಶ್ವರ ಬಿಡದು. ಹಾಗೆ ಇವರ ಕರ್ಮಶೀಲತೆ ಈ ಮೌನದ ಕೋಟೆಯನ್ನೂ ಒಡೆದಿದೆ. ಹಿಂದುಸ್ಥಾನ

ದಂಥ ದೊಡ್ಡ ಭೂಖಂಡದ ಯೋಗಕ್ಷೇಮವನ್ನು ಹೊತ್ತು, ಜನಜೀವನದ ಸಣ್ಣ ಪುಟ್ಟ ವಿಭಾಗಗಳಲ್ಲೂ ಕೈಹಾಕುವ ಕರ್ಮಯೋಗಿಗೆ ವಿರಾಮ ಹೇಗೆ ಸಿಗಬೇಕು. ಯಾವುದೋ ಒಂದು ಪ್ರಶ್ನೆ, ಏನೋ ಒಂದು ಪ್ರಸಂಗ, ಅತ್ಯಗತ್ಯವಾಗಿ ವಿಚಾರಿಸಬೇಕಾಗಿ ಬರುತ್ತದೆ. ಅಂಥ ಸಮಯದಲ್ಲಿ ಗಾಂಧೀಜೀ ತಮ್ಮ ಮೌನವನ್ನು ಅನುಕೂಲವಾಗಿ ಅಳಕಮಾಡುತ್ತಾರೆ. ಇದಿರಿನವರು ಮಾತಾಡಿದರೆ ತಾವು ಮರುಮಾತಾಡದೆ ಹಲಗೆಯ ಮೇಲೋ, ಕಾಗದದ ಮೇಲೋ ತಮ್ಮ ಉತ್ತರಗಳನ್ನು ಬರೆಯುತ್ತಾರೆ. ಒಂದು ರೀತಿ ಯಿಂದ ಈ ತರದ ಮೌನ ಬರೀ ಮಾತಾಡದಿರುವ ಒಂದು ಸೋಗಿನಂತೆ ಕಾಣುತ್ತದೆ. ಗಾಂಧೀಜೀ ಕೇವಲ ಅರ್ಥಭಕ್ತರೇನೋ ಶಬ್ದವಾದಿ ಗಳೇನೋ ಅನಿಸುತ್ತದೆ. ಇನ್ನೊಂದು ರೀತಿಯಲ್ಲಿ ಗಾಂಧೀಜಿಯ ಔದಾರ್ಯ ಕಂಡು ಬರುತ್ತದೆ. ತಮ್ಮ ವ್ರತದ ಕರ್ಮಠತನವನ್ನು ಬಿಟ್ಟು. ಲೋಕ ಸಂಗ್ರಹದ ದೃಷ್ಟಿಯಿಂದ ಕೆಲಸಮಾಡುತ್ತಾರೆ. ವ್ರತವೂ ದಕ್ಕುತ್ತವೆ, ಹಿತವೂ ಆಗುತ್ತದೆ ಈ ಔದಾರ್ಯದಲ್ಲಿ.

ಈ ಮೌನವ್ರತ ಗಾಂಧೀಜಿಯ ಜೀವನದಲ್ಲಿ ಹೇಗೆ, ಯಾವಾಗ ಸೇರಿ ಕೊಂಡಿತೆಂಬುದು ಸರಿಯಾಗಿ ತಿಳಿದಿಲ್ಲ. ಮಹಾದೇವ ದೇಸಾಯಿಗೇ ಇದರ ಮೂಲ ಖಚಿತವಾಗಿ ಗೊತ್ತಿಲ್ಲ. "ಈ ಮೌನ ಯಾವಾಗ ಮೊದಲಾಯಿ ತೆಂಬುದು ನನಗೆ ತಿಳಿಯದಿದೆ. ನನಗೆ ನೆನಪಿದ್ದ ಮಟ್ಟಿಗೆ ಇದು ಉಪ ವಾಸದ ತಮ್ಮ. ೧೯೨೧ ರಲ್ಲಿ ಬೊಂಬಾಯಿಯಲ್ಲಿ ಹಿಂದೂ ಮುಸ್ಲಿಮ್ ದಂಗೆಯಾದಾಗ ಗಾಂಧೀಜೀ ಉಪವಾಸ ಮಾಡಿದರು. ಅದರ ಅಂಗವಾಗಿ ಮೌನ ಮೊದಲಾಯಿತು. ಉಪವಾಸ ಮುಗಿವುದರೊಳಗಾಗಿ ಸಂದರ್ಶನಾ ಭಿಲಾಷಿಗಳ ದಾಳಿಯಿಂದ ಮುಕ್ತರಾಗಲು ಇದೊಂದು ಒಳ್ಳೇ ಉಪಾಯ ವೆಂದು ಕಂಡು ಬಂತು. ಮುಂದೆ ಕ್ರಮವಾಗಿ ಇದು ಪ್ರತಿ ಸೋಮವಾರ ಮೌನವ್ರತದ ನಿಯಮವಾಗಿ ಪರಿಣಮಿಸಿತು. ಎಳೆತನದಿಂದ ಹರೆಯದ ವರೆಗೆ ಗಾಂಧೀಜಿಗೆ ಮಾತಾಡದಿರುವುದೇ ಹೆಚ್ಚು ಕಡಮೆ ಸ್ವಭಾವವಾಗಿತ್ತು. ಆದರೆ ಆ ಮೂಕಜೀವಿ ಒಮ್ಮೆ ಮಾತಿನ ಲೋಕದಲ್ಲಿ ವೇಗದಿಂದ ಧುಮುಕಿ ದಾಗ ಒಂದು ಅಪೂರ್ವ ಓಜಸ್ಸು ಆ ಮಾತಿನಲ್ಲಿ ಹರಿಯಿತು. ಅಸಾಮಾನ್ಯ ಧಾರೆಯೊಂದು ಕಂಡು ಬಂತು. ಈ ಶಕ್ತಿ ಮತ್ತೆ ಮೌನದಲ್ಲಿ ಲೀನವಾಗು

ವುದು ಸಾಧ್ಯವೇ ? ಆದರೆ ಮೇಲಿಂದ ಮೇಲೆ ಈ ವ್ರತದ ಪ್ರಯೋಗ ಮಾಡಿದುದರಿಂದ ಅವರಿಗೆ ಅದರ ಆಧ್ಯಾತ್ಮಿಕ ಗುಣದ ಅನುಭವ ದೊರೆಯಿತು. ಕೆಲವು ವರ್ಷಗಳಿಂದ ಈ ಸೋಮವಾರದ ಮೌನ ಅವರಿಗೆ ಆಧ್ಯಾತ್ಮಿಕ ಆಹಾರವಾಗಿದೆ. ನಿಜವಾಗಿ ಅವರಿಗೆ ಏಕಾಂತದಷ್ಟು ಆನಂದದಾಯಕವಾದುದು ಯಾವುದೂ ಇಲ್ಲ. ಆಗಾಗ ದಿನಗಟ್ಟಲೆ ಮೌನ ಧಾರಣೆ ಮಾಡುತ್ತಾರೆ. ಬಹಳ ದೀರ್ಘವಾದ ಮೌನವೆಂದರೆ ಒಮ್ಮೆ ೨ ತಿಂಗಳು ನಡೆಸಿದುದು. ಅದರ ಉದ್ದೇಶವೂ ಇಷ್ಟೆ'.

ಸುತ್ತಲಿನ ವಾತಾವರಣದಿಂದ ಹರಿದೋಡಿ, ಒಳಗೊಳಗೇ ಹುದುಗಿಕೊಳ್ಳಲು ಗಾಂಧೀಜೀ ಎಷ್ಟೋ ಇಂಥ ಪ್ರಯೋಗಗಳನ್ನು ಮಾಡಿದ್ದಾರೆ. ಆದರೆ ಅದರಲ್ಲಿ ಸನ್ಯಾಸಿ–ಯೋಗಿಗಳಂತೆ ಸಮಾಜವನ್ನು ಬಿಟ್ಟೋಡುವ ಪ್ರಯತ್ನವಿಲ್ಲ. 'ಈಸುವ, ಇದ್ದು ಜೈಸುವ' ಪಂಥ ಇವರದು. ಅವರ ಆಹಾರದ ಪ್ರಯೋಗಗಳೂ ಈ ಜಾತಿಯವೇ. ಒಮ್ಮೆ ಇವರು ಕಲಕತ್ತೆಗೆ ಹೋಗಿದ್ದಾಗ ಭೂಪೇಂದ್ರನಾಥ ಬಸುವಿನ ಅತಿಥಿಗಳಾಗಿದ್ದರು. ಅವರು ಅಪಾರ ಪ್ರೇಮದಿಂದ ಪಕ್ವಾನ್ನಗಳನ್ನು ಮಾಡಿಸಿ, ಊರಿನಲ್ಲಿದ್ದ ಎಲ್ಲ ಜಾತಿಯ ಹಣ್ಣು ಹಂಪಲನ್ನೂ ತರಿಸಿದರು. ಇದೆಲ್ಲವನ್ನು ನೋಡಿ ಗಾಂಧೀಜಿಗೆ ಧರ್ಮಸಂಕಟಕ್ಕೆ ಬಂತು. ಈ ಆತಿಥ್ಯದ ಹೊರೆಯನ್ನು ಹೊರುವುದು ಹೇಗೆ ? ಕೊನೆಗೆ ಅಂದೇ ಒಂದು ವ್ರತವನ್ನು ಹಿಡಿದರು. ಒಂದು ದಿನದಲ್ಲಿ ಐದು ಪದಾರ್ಥಗಳಿಗಿಂತ ಹೆಚ್ಚು ತಿನ್ನುವಹಾಗಿಲ್ಲ. ಅದರಿಂದ ಅವರ ಆರೋಗ್ಯ ಪಾಲನೆಗೆ ಮುಂದೆ ಬಹಳ ಸಹಾಯವಾಯಿತು.

ಇದೇ ಹಾದಿಯಲ್ಲಿ ಒಮ್ಮೆ ಗಾಂಧೀಜಿಯ ವಿಚಿತ್ರ ಪ್ರಯೋಗವೊಂದು ನಡೆಯಿತು. ವಚೋನಿಗ್ರಹದಂತೆ ದೃಷ್ಟಿನಿಗ್ರಹದ ಪ್ರಯತ್ನ ಮಾಡಿದರು. ಇಪ್ಪತ್ತನಾಲ್ಕು ತಾಸೂ ಕಣ್ಣು ಮುಚ್ಚಿಕೊಂಡು ಬಿಡುವುದು. ಹುಟ್ಟು ಕುರುಡನಂತೆ ಬಾಳು ಸಾಗಿಸಿದರು ಕೆಲವು ದಿನ. ಆಶ್ರಮವಾಸಿಗಳಿಗೆಲ್ಲ ಗಾಬರಿಯಾಯಿತು. ದಿನಚರಿಯಲ್ಲಿ ಯಾವುದನ್ನೂ ಬದಲು ಮಾಡಲಿಲ್ಲ ಯಥಾಕ್ರಮವಾಗಿ ಎಲ್ಲಾ ನಡೆಯಿತು. ಸಂಭಾಷಣೆಗಳು ಪತ್ರವ್ಯವಹಾರ, ಎಲ್ಲವೂ ನಡೆದವು. ಕಾಗದ ಓದಿಸಿ ಕೇಳಿ ಉತ್ತರ ಬರೆಸಿದರು. ಸಂದರ್ಶನಗಳಲ್ಲಿ ಕಣ್ಣುಮುಚ್ಚಿಕೊಂಡೇ ಬಂದವರೊಡನೆ ಮಾತಾಡಿದರು.

ಓಡಾಡಬೇಕಾದರೆ ಯಾರಾದರೂ ಕೈ ಹಿಡಿದು ಕರೆದೊಯ್ಯಬೇಕು. ಅಲ್ಲಿದ್ದವರೆಲ್ಲ ಇದೇನು ಹುಚ್ಚು ಎಂದರು. ಮಹಾದೇವ ದೇಸಾಯಿ ಆಗ ಕಲಕತ್ತೆಗೆ ಹೋಗಬೇಕಾಗಿತ್ತು. ಕೆಲವು ವಾರಗಳವರೆಗೆ ಬರುವ ಹಾಗಿರಲಿಲ್ಲ. ಕಣ್ಣು ತೆರೆದು ನನ್ನನ್ನು ನೋಡುವವರೆಗೆ ನಾನು ಊರಿಗೆ ಹೋಗುವುದಿಲ್ಲ ಎಂದರು. ಕೊನೆಗೆ ಅವರನ್ನೊಮ್ಮೆ ನೋಡಿದ ಮೇಲೆ ಮತ್ತೆ ಕತ್ತಲಿಗೆ ಶರಣು ಹೋಗುವ ಕರಾರಿನ ಮೇಲೆ ಗಾಂಧೀಜೀ ಕಣ್ತೆರೆದರು. ೨-೩ ದಿನವಾದಮೇಲೆ ಆ ವ್ರತವನ್ನು ಬಿಟ್ಟರು. ಇದುವರೆಗೆ ಎರಡನೆಯ ಸಲ ಈ ಪ್ರಯೋಗವಾಗಲಿಲ್ಲ. ಮನಸ್ಸನ್ನು ಅಂತರ್ಮುಖಿಯಾಗಿ ಮಾಡಲು ಇದೂ ಒಂದು ಸಾಧನವೆಂದು ಗಾಂಧೀಜೀ ಪ್ರಯತ್ನಿಸಿದಂತೆ ಕಾಣುತ್ತದೆ.



# ಆನಂದ ತೀರ್ಥ

'ಈಗ ಗದ್ದಲವೆಲ್ಲ ಮುಗಿದಮೇಲೆ ಒಂದು ಸಲ ನಿಮ್ಮ ಆಶ್ರಮಕ್ಕೆ ಬಂದು ಎಲ್ಲ ಪಾಪವನ್ನು ತೊಳೆದುಕೊಳ್ಳಬೇಕು' ಅದನಂತೆ ಇಂಗ್ಲೆಂಡಿನ ಪ್ರಧಾನ ಮಂತ್ರಿ ಮ್ಯಾಕ್ಡೊನಲ್ಡ್ ಗಾಂಧೀಜೀ ದುಂಡು ಮೇಜಿನ ಪರಿಷತ್ತಿಗೆ ಹೋಗಿದ್ದಾಗ. ಆ ಪುಣ್ಯ ಅವನ ಹಣೆಯಲ್ಲಿ ಬರೆದಿರಲಿಲ್ಲ. ಗಾಂಧೀಜಿಯು ಆಶ್ರಮಕ್ಕೆ ಬಾರದೆಯೇ ಕಣ್ಣು ಮುಚ್ಚಿದ.

ಅವನಿಗಲ್ಲದಿದ್ದರೂ ಅವನಂಥ ಉಳಿದ ಪರಂಗಿಗಳಿಗೆ—ಹಿಂದೂಸ್ತಾನದವರ ಮಾತಿರಲಿ—ಗಾಂಧಿಜೀ ಆಶ್ರಮ ಪಾಪವಿನಾಶಿನಿಯಾಗಿದೆ. ದಿನವೂ ಜನ ಬರುತ್ತಲೇ ಇರುತಾರೆ ತೀರ್ಥಯಾತ್ರೆಗೆ ಬಂದಂತೆ. ತಿರುಪತಿ ಮೇಲು ಕೋಟೆಗಳಿಗೆ ಹೋಗುವವರೆಲ್ಲ ಭಕ್ತಾಗ್ರೇಸರರೆ? ಎಲ್ಲ ತರದವರೂ ಬರುತ್ತಾರೆ. ದೇವರು ಯಾರಿಗೆ ಬೇಡ! ರಾಜದರ್ಶನವಾದವರೆಲ್ಲ ರಾವ್ ಬಹಾದೂರರಾಗುತ್ತಾರೆಯೆ? ಹಾಗೆಯೆ ಗಾಂಧಿಜೀಯನ್ನೂ ನೋಡಬರುವ ಜನರೂ ನಾನಾ ತರದವರು. ಈಗ ಅಮೆರಿಕದಲ್ಲಿ ಬ್ರಿಟಿಷರ ರಾಯಭಾರಿಯಾಗಿದ್ದ ಲಾರ್ಡ್ ಲೋಥಿಯನ್ ಬಹಳ ದಿನದ ಹಿಂದೆಯೆ ಗಾಂಧೀ ಆಶ್ರಮದಲ್ಲಿ ಇದ್ದು ಹೋದರು. ರಷ್ಯಾದಲ್ಲಿ ರಾಯಭಾರಿಯಾಗಿದ್ದ ಸರ್ ಸ್ಟಾಫರ್ಡ್ ಕ್ರಿಪ್ಸರ ರಾಯಭಾರ ಪ್ರಕರಣ ಮೊದಲಾದದ್ದು ಬಹುಶಃ ಈ ಆಶ್ರಮದಲ್ಲೇ. ಈ ರಾಜಕೀಯ ಧುರೀಣರು ತಮ್ಮ ಕರ್ಮಕಳೆಯಲು ಇಲ್ಲಿ ಬಂದರೆ ಉಳಿದ ಕಿರಸ್ತಾನ ಮುಖಂಡರು ಪಾಪವಿನಾಶಿನಿಯಲ್ಲಿ ಮೀಯಲೆಂದೇ ಬರುತ್ತಾರೆ. ಗಾಂಧೀಜೀ ಯೇಸುಕ್ರಿಸ್ತನ ಅಪರಾವತಾರವಲ್ಲವೆ! ಡಾ. ಮೋಟ್, ಡಾ ಚೆಸ್ಟರ್‌ಮನ್, ಮ್ಯೂರಿಯಲ್ ಲೆಸ್ಟರ್ ಮುಂತಾದವರು ಆ ದೃಷ್ಟಿಯಿಂದಲೇ ಆಶ್ರಮಯಾತ್ರೆ ಮಾಡಿದಾರೆ. ಆಂಡ್ರೂಸರವರು ನಮ್ಮವರೇ ಆಗಿದ್ದರು.

ನಮ್ಮವರಿಗೆ ಗಾಂಧೀ ಆಶ್ರಮ ಕಾಶೀ–ರಾಮೇಶ್ವರ, ಘಟಿಕಾಚಲ. ಈ ಕಾಲದ ಮಹಾಕ್ಷೇತ್ರ. ಆ ಕ್ಷೇತ್ರಕ್ಕೆ ನಿತ್ಯವೂ ಹೋಗಿಬರುವ

ನಮ್ಮ ಯಾತ್ರಿಕರಿಗೆ ಲೆಕ್ಕವೇ ಇಲ್ಲ. ಕೆಲವರಿಗಂತೂ ಅದು ತಪೋ ಭೂಮಿ.

ಪರಂಗಿಯವರಿಗೆ ಹಿಂದುಸ್ಥಾನವಲ್ಲೆಲ್ಲ ಮೊದಲು ಇದ್ದದ್ದು ಎರಡೇ ಸ್ಥಳ. ಕಾಂಚನಗಂಗೆ, ತಾಜಮಹಾಲು! ಹೊರಗಿನಿಂದ ದೇಶನೋಡಲು ಬಂದವರಿಗೆ ಹಿಮಾಲಯ ರಾಮೇಶ್ವರಗಳ ನಡುವೆ ತಾಜಮಹಾಲು, ದೆಹಲಿ ವಿನಾ ಮತ್ತೇನೂ ಇರಲಿಲ್ಲ. ಹಕ್ಕಿಯ ಹಾಗೆ ಹಿಂದುಸ್ತಾನದ ಮೇಲೆ ಹಾರಿಹೋಗುತ್ತಿದ್ದರು. ಕೊಂಚ ಸಂಸ್ಕೃತಿಯಿದ್ದ ರಸಿಕರು ಅಜಂತಾ, ಬಹಳವಾದರೆ ಗೇರುಸೊಪ್ಪೆ ನೋಡಿದರೆ ಮುಗಿಯಿತು. ಆದರೆ ಈಗ ಅದೆಲ್ಲ ತಲೆಕೆಳಗಾಗಿದೆ. ಈಗ ತಾಜಮಹಾಲಲ್ಲ. ಗಾಂಧೀಜಿಯ ಆಶ್ರಮ ಪ್ರವಾಸಿಗಳ ಪ್ರಥಮ ಕ್ಷೇತ್ರ. ಉಳಿದುದೆಲ್ಲವನ್ನೂ ಬಿಟ್ಟರೂ ಬಂದೀತು. ಎಷ್ಟೇ ಕೊಂಚವೇಳೆಯಿರಲಿ ಗಾಂಧೀ ಆಶ್ರಮವನ್ನು ನೋಡದೆ ಹೋಗುವುದು ಹೇಗೆ? ಅವನ್ನೇ ನೋಡದಿದ್ದರೆ ಹಿಂದುಸ್ತಾನಕ್ಕೆ ಬಂದೇನು ಸಾರ್ಥಕ? ಗುಡಿಗೆ ಬಂದು ದೇವರನ್ನು ನೋಡದೆ ಹೋದಂತೆ!

ಯಾರ ಪಾಪ ತೊಳೆಯಲಿ ಬಿಡಲಿ, ಯಾರ ಕರ್ಮ ಅಳಿಯಲಿ ಉಳಿಯಲಿ ಗಾಂಧೀಜೀಯೇನೋ ತಮ್ಮ ಆಶ್ರಮ ಕ್ಷೇತ್ರದಲ್ಲಿ ತಮ್ಮ ಕರ್ಮವನ್ನು ಕಳೆಯುತ್ತಿದಾರೆ. ಹಳದನ್ನು ಕಳೆದು ಹೊಸದನ್ನು ಕಟ್ಟುತ್ತಿದ್ದಾರೆ.

ಆಶ್ರಮ ಅಂದರೆ ಗಾಂಧೀಜೀಗೆ ತುಂಬಾ ಪ್ರೀತಿ. ಆಶ್ರಮಜೀವನ ಅವರಿಗೊಂದು ಹುಚ್ಚು. ಆ ಗುರಿಯನ್ನು ೩೦-೪೦ ವರ್ಷದ ಕೆಳಗೆ ತಮ್ಮ ಮನಸಿನಲ್ಲಿ ರೂಪಿಸಿಕೊಂಡರು. ಆಗಿನಿಂದ ಈಗಿನವರೆಗೆ ಆ ಜೀವನಕ್ಕಾಗಿ ಎಷ್ಟೋ ಪ್ರಯೋಗಮಾಡಿದಾರೆ. ಮೊದಲು ದಕ್ಷಿಣ ಆಫ್ರಿಕದಲ್ಲಿ ಫೀನಿಕ್ಸ್, ಆಮೇಲೆ ಹಿಂದುಸ್ತಾನದಲ್ಲಿ ಸಾಬರ್ಮತಿ ಸತ್ಯಾಗ್ರಹಾಶ್ರಮ, ಈಗ ಸೇವಾಗ್ರಾಮದ ಆಶ್ರಮ ನಡುವೆ ವರ್ಧಾ ಆಶ್ರಮ. ಅವರ ಪ್ರಭಾವದಿಂದ ಈ ಇಪ್ಪತ್ತೈದು ವರ್ಷದೊಳಗೆ ದೇಶದಲ್ಲಿ ಎಷ್ಟೋ ಮರಿ ಆಶ್ರಮಗಳು ಹುಟ್ಟಿಕೊಂಡಿವೆ, ಅವುಗಳ ಪ್ರಸ್ತಾಪ ಇಲ್ಲಿ ಸರಿಯಲ್ಲ.

ಗಾಂಧೀಜಿಗೆ—ಮೊದಲು ಹೇಳಿದ ಹಾಗೆ—ಆಶ್ರಮ ಜೀವನ ತುಂಬಾ ರುಚಿ. ಸಾಬರ್ಮತಿಯಲ್ಲಿದ್ದಾಗ ಆಶ್ರಮ ಬಿಟ್ಟು ತಿಂಗಳುಗಟ್ಟಲೆ ನಾಡಿನಲ್ಲಿ ಪ್ರವಾಸಮಾಡುತ್ತಿದ್ದರು. ಈಗ ಹಾಗಿಲ್ಲ. ಇಂಥ ದೊಡ್ಡ ಸತ್ಯಾ

ಗ್ರಹವನ್ನು ನಡೆಸುತ್ತಿದ್ದರೂ ಆಶ್ರಮ ಬಿಟ್ಟು ಕದಲುವದಿಲ್ಲ. 'ಸೇವಾ ಗ್ರಾಮದಲ್ಲಿ ಹೂತುಕೊಂಡು ಬಿಡುತ್ತೇನೆ. ಈ ಸತ್ಯಾಗ್ರಹದಲ್ಲಿ ಏನು ಮಾಡ ಬೇಕಾದದ್ದು ಅಲ್ಲಿಂದಲೇ ಮಾಡುತ್ತೇನೆ' ಅಂತ ಮೊದಲೇ ಮುಂಬಯಿ ಅಖಿಲ ಭಾರತ ಕಾಂಗ್ರೆಸ್ ಸಮಿತಿಯಲ್ಲಿ ಬಹಿರಂಗವಾಗಿ ಹೇಳಿದ್ದರು. ಆಶ್ರಮಬಿಟ್ಟು ಅನಗತ್ಯವಾಗಿ ಒಂದೇ ಒಂದುಗಳಿಗೆ ಕಳೆಯುವುದು ಕೂಡ ಅವರ ಮನಸಿಗೆ ಬೇಡ. ಸಾಧ್ಯವಾದ ಮಟ್ಟಿಗೂ ಅಲ್ಲಿಂದಲೇ ಕೆಲಸಮಾಡಿ ಕೊಳ್ಳುತ್ತಾರೆ. ತೀರ ಅಗತ್ಯವಾದರೆ ಹೊರಗೆ ಬರುತ್ತಾರೆ.

ಮೊನ್ನೆ ವೈಸರಾಯರನ್ನು ನೋಡಲಿಕ್ಕೆ ಸಿಮ್ಲಾಕ್ಕೆ ಹೋಗಿದ್ದರಲ್ಲ. ವೈಸರಾಯ್ ಕೇಳಿದರಂತೆ ನಾಳೆ ಇರುತೀರಾ ಅಂತ. "ನೀವಾಗಿ ಇರು ಅಂದರೆ ಇರುತ್ತೇನೆ, ಇಲ್ಲವಾದರೆ ವರ್ಧಾಕ್ಕೆ ಈ ಹೊತ್ತೇ ಹೊರಟುಬಿಡು ತ್ತೇನೆ." ಅಂದರಂತೆ ಗಾಂಧೀಜೀ. ಯಾರಾದರೂ ಅಲ್ಲಿದ್ದವರು ಏನಪ್ಪವಸರ ಅಂದಿದ್ದರೆ, ಮೈಸೂರಿನ ದಾಸಪ್ಪನವರಿಗೆ ಕಾಯಿಲೆ, ಆಶ್ರಮದಲ್ಲಿ ಬಂದಿ ದ್ದಾರೆ, ಅವರನ್ನು ನೋಡಿಕೋಬೇಡವೆ ಅನ್ನುತ್ತಿದ್ದರೋ ಏನೋ! ಅಥವಾ ನಾಳೆ ಸೇವಾಗ್ರಾಮದ ಖಾದೀ ಬೀರಪ್ಪನ ಮದುವೆ, ನಾನಿರದಿದ್ದರೆ ಹೇಗೆ ಅನ್ನುತ್ತಿದ್ದಿರಬಹುದು. ವೈಸರಾಯ್‌ನಂಥವರು ಇನ್ನೊಂದು ದಿನ ಇರು ತೀರಾ ಅಂದರೆ ಇಂಗಿತಜ್ಞರಂತೆ ಇರುತೇನೆ ಅನ್ನಬಾರದೆ. ಏನು ಆಶ್ರಮ ದಲ್ಲಿ ಸೂರೆಹೋಗುವುದು?

ಹೌದು, ಗಾಂಧೀಜೀ ಹಾಗೆಯೇ. ವರ್ಧಾ ಆಶ್ರಮಕ್ಕೆ ಅಷ್ಟು ಹತ್ತರ; ಆದರೂ ಗಾಂಧೀಜೀ ಕೆಲಸವಿಲ್ಲದೆ ವರ್ಧಾಕ್ಕೆ ಬರುವುದಿಲ್ಲ. ಅಗತ್ಯವಾದ ಕೆಲಸವಿದ್ದವರು ತಾವೇ ಅಲ್ಲಿಗೆ ಹೋಗಬೇಕು. ಮೌಲಾನಾ ಆಶ್ರಮಕ್ಕೆ ಹೋಗಿದ್ದರು, ರಾಜಗೋಪಾಲಾಚಾರ್ಯರು ಹೋಗಿದ್ದರು, ಜವಾ ಹರರು ಹೋಗಿದ್ದರು ಅಂತ ಓದುತ್ತೇವೆ ಪತ್ರಿಕೆಗಳಲ್ಲಿ. ಗಾಂಧೀಜೀ ಬಂದಿದ್ದರು ಅಂತ ಬರುವುದಿಲ್ಲ. ರಾಷ್ಟ್ರಪತಿಯೇ ಆಗಲಿ ಆಶ್ರಮದ ಗಾಳಿ ಕುಡಿಯಬೇಕಾದ್ದೇ. ಯಾವಾಗಲಾದರೂ ವರ್ಧಾದಲ್ಲಿ ಕಾಂಗ್ರೆಸ್ ವರ್ಕಿಂಗ್ ಕಮಿಟಿ ನಡೆಯುತ್ತದೆಯಲ್ಲ. ಅದಕ್ಕೆ ಗಾಂಧೀಜೀ ಬರುತ್ತಾ ರಷ್ಟೆ. ಕೆಲಸವಾದ ಮೇಲೆ ಒಂದು ಗಳಿಗೆಯೂ ನಿಲ್ಲುವದಿಲ್ಲ. ರಾತ್ರಿ ನಿಲ್ಲುವದು ಇಲ್ಲವೇ ಇಲ್ಲ. ಸಿಂಹದ ಬಲ ಅಡವಿಯಲ್ಲಿ, ವೀರನ ಶೌರ್ಯ

ಯುದ್ಧದಲ್ಲಿ, ತಪಸ್ವಿಯ ಪ್ರಭಾವ ಆಶ್ರಮದಲ್ಲಿ, ಗಾಂಧೀಜೀಗೆ ಇದ ಗೊತ್ತಿರಬೇಕು.

ಈ ಪ್ರಭಾವ ಬಹಳ ಬಲವಾದುದು. ಕಬ್ಬಿಣವನ್ನು ಸೂಜಿಗಲ್ಲು ಎಳೆವಂತೆ ಯೋಗ್ಯ ಜೀವಗಳನ್ನು ಎಲ್ಲಿದ್ದರೂ ಎಳೆಯುತ್ತದೆ. ಆಚಾರ್ಯ ಪ್ರಫುಲ್ಲ ಚಂದ್ರರಾಯ್, ಆಚಾರ್ಯ ರಾಧಾಕೃಷ್ಣನ್, ಪಂಡಿತ ಮಾಳವೀಯ ರನ್ನು ಎಳೆದಿದೆ. ಜವಾಹರರು ಆ ಪ್ರಭಾವಳಿಯಲ್ಲಿಯೇ ಸೇರಿದಾರೆ. ದೂರದ ಚೈನಾದಿಂದ ಅಧ್ಯಕ್ಷರು ತಾಜ ತೌ ಬಂದು ಹೋದ ಸವಿನೆನಪು ಇನ್ನೂ ಹೊಸದು, ಜಪಾನಿನ ಗಾಂಧೀ ಕಾಗವಾ ಬಂದು ಹೋದದ್ದು ಗೊತ್ತಿಲ್ಲವೆ? ಜಪಾನಿನ ಕವೀಂದ್ರ ಯೋನೆ ನೆಗೂಚಿ ಈಗಲೂ ತಮ್ಮ ಆಶ್ರಮ ಯಾತ್ರೆಯನ್ನು ನೆನಪಿಟ್ಟಿದ್ದಾರೆ. ಕವಿ ವೇದಾಂತಿಗಳನ್ನಲ್ಲದೆ ಶುದ್ಧ ವ್ಯಾವಹಾರಿಕರನ್ನೂ ಈ ಬಲೆಬಿಟ್ಟಿಲ್ಲ. ಬಡವರಿಗೆ ಮಹಾ ಯಾತ್ರೆಯಿದ್ದಂತೆ ಸಿರಿವಂತರಿಗೂ ಒಂದು ತೀರ್ಥ. ಮೊನ್ನೆ ಮೊನ್ನೆ ವಿಜಯನಗರಂ ರಾಜ ಕುಮಾರರು ಹೋಗಿಬರಲಿಲ್ಲವೆ. ಮೊನ್ನೆ ಮೊನ್ನೆ ನಿವೃತ್ತರಾದ ಒಬ ಗವರ್ನರ್ 'ಈ ಅಧಿಕಾರ ಬಂಧನದಲ್ಲಿದ್ದು ಗಾಂಧಿಯನ್ನು ನೋಡಲಿಕ್ಕಾಗಲಿ ಅವರ ಆಶ್ರಮಕ್ಕೆ ಹೋಗಲಿಕ್ಕಾಗಲಿ ಇಲ್ಲದೆ ಹೋಯಿತು. ಹಿಂದೂಸ್ತಾನದಲ್ಲಿಷ್ಟು ದಿನ ಇದ್ದು ಹಿಂದೂಸ್ತಾನವನ್ನೇ ನೋಡದ ಹಾಗಾಯಿತು' ಅಂದನಂತೆ.

ನಿಜ, ಆಶ್ರಮದಲ್ಲಿ ವಿರಾಮವಾಗಿ ತಿರುಗಾಡಿದರೆ ಒಂದು ಚಿತ್ರ ವಿಚಿತ್ರ ಮಾನವ ಸಂಗ್ರಹಾಲಯವೇ ಕಾಣುತ್ತದೆ. ಖಾದೀ–ಕಾಂಗ್ರೆಸ್‌ಗಾಗಿ ದುಡಿವ ದೀಕ್ಷೆ ತೊಟ್ಟ ಮಹಾ ದೇವರು ಕೆಲವರು; ವ್ಯಾಪಾರ ವ್ಯವಹಾರ ಗಳಲ್ಲಿ ನಿಷ್ಣಾತರಾದ ಬಿರ್ಲಾರಂಥ ಕುಬೇರರು; ಸಂಸ್ಥಾನಗಳ ರಾಜರಾದ ಔಂಧರಾಜರಂಥವರು, ವಿಜಯನಗರಂ ರಾಣಿಯಂಥವರು, ಸಂಗೀತ ಸರಸ್ವತಿಯಾದ ದಿಲೀಪಕುಮಾರರಾಯರಂಥ ಕಲಾವಿದರು ಒಮ್ಮೊಮ್ಮೆ ಅಕಸ್ಮಾತ್ತಾಗಿ ಅಲ್ಲಿ ಸಿಕ್ಕಬಹುದು. ಭಾರತನಾಯಕರ ಮಾತಂತೂ ಹೇಳುವ ಹಾಗೆಯೇ ಇಲ್ಲ.

ಹೀಗಿದ್ದರೂ ಆಶ್ರಮದ ಗಾಳಿಯಲ್ಲಿ ಅಂಥ ವಿಲಕ್ಷಣವಾದುದೇನೂ ಹೆಚ್ಚಾಗಿ ಕಾಣುವುದಿಲ್ಲ. ರವೀಂದ್ರ ಕವಿಯ ಶಾಂತಿನಿಕೇತನದಲ್ಲಿ ಕಾಣ

ಬಹುದಾದ ರಾಮಣೀಯಕತೆ, ಮಾಧುರ್ಯ ಕಲೆಯಾಗಲಿ; ಅರವಿಂದ ಯೋಗಿಯ ಪುದುಚೇರಿ ಆಶ್ರಮದಲ್ಲಿ ಕಂಡುಬರುವ ಗೂಢಗಾಂಭೀರ್ಯ, ಅಗಾಧ ರಹಸ್ಯವಾಗಲಿ; ತಿರುವಣ್ಣಾಮಲೆಯ ರಮಣಾಶ್ರಮದ ವೇದ ಘೋಷ, ನಿತ್ಯದರ್ಶನೋತ್ಸಾಹವಾಗಲಿ ಇಲ್ಲಿಲ್ಲ. ಕವಿಪ್ರಸಾದಿಸುವ ರಸ ಶಾಂತಿಯಾಗಲಿ ಯೋಗಿ ಅನುಗ್ರಹಿಸುವ ಆತ್ಮಶಾಂತಿಯಾಗಲಿ ಮಹರ್ಷಿ ತೋರುವ ವಿಚಾರ ಶಾಂತಿಯಾಗಲಿ ಇಲ್ಲಿ ಪ್ರಧಾನವಲ್ಲ. ಗಾಂಧೀಜಿ ಆಶ್ರಮದಲ್ಲಿ ಕರ್ಮಶಾಂತಿಯೇ ಮುಖ್ಯ. ಕರ್ಮವೇ ಇಲ್ಲಿ ಶಾಂತಿ, ಕರ್ಮದಿಂದಲೇ ಶಾಂತಿ.

ಸರೋಜಿನಿನಾಯುಡು ಒಂದು ಸಲ ಹೇಳಿದ್ದರು. 'ನಮ್ಮ ದೇಶದಲ್ಲಿ ಇಬ್ಬರು ಮಹಾತ್ಮರಿದ್ದಾರೆ. ಒಬ್ಬರು ರಮಣ ಮಹರ್ಷಿ, ಇನ್ನೊಬ್ಬರು ಗಾಂಧೀಜಿ. ಅವರು ಎಲ್ಲರಿಗೂ ಶಾಂತಿಕೊಡುತ್ತಾರೆ. ಇವರು ಯಾರನ್ನೂ ಶಾಂತವಾಗಿ ಕೂಡಗೊಡುವುದಿಲ್ಲ. ಇಬ್ಬರದೂ ಒಂದೇ ಉದ್ದೇಶ.'

ಆಶ್ರಮದಲ್ಲಿ ಕಾಲಿಟ್ಟೊಡನೆ ಈ ಮಾತಿನ ಸತ್ಯ ಗೊತ್ತಾಗುತ್ತದೆ. ಗಾಂಧೀಜಿಯ ದಿನಚರಿಯಲ್ಲಿ ಒಂದು ಗಳಿಗೆಯಾದರೂ ವಿರಾಮವಿಲ್ಲ. ಸದಾ ಯಂತ್ರ ತಿರುಗುತ್ತಲೇ ಇರುತ್ತದೆ. ಕೆಲಸ ಕೆಲಸ, ಹಗಲೆಲ್ಲ ಯಾವುದೋ ಒಂದು ಕೆಲಸ. ತಾವೊಬ್ಬರು ಕರ್ಮನಿರತರಾಗಿದ್ದರೆ ಸಾಲದು. ಸುತ್ತ ಲಿದ್ದವರನ್ನೂ ತಿರುಗಿಸುತ್ತದೆ ಆ ಯಂತ್ರ. ಆದರೆ ಆ ಕರ್ಮ ಯಾವುದೋ ಆಶಾಪಿಶಾಚ ಮಾಡಿಸುವ ದುಡಿತವಲ್ಲ. ಅದು ಅನಾಸಕ್ತ ಕರ್ಮ. ಗಾಂಧೀಜಿಗೆ ಕರ್ಮವು ಯಜ್ಞ, ಅವರು ಮಾಡುವುದು ಯಜ್ಞಾರ್ಥಕರ್ಮ. ನಿತ್ಯ ಯಜ್ಞಕ್ಕೆ ಹಿಂದಿನವರು ಒಂದು ಅರ್ಥ ಕೊಟ್ಟು ಹವನ ಹೋಮಾದಿ ಗಳಿಗೆ ಪ್ರಾಧಾನ್ಯ ಸಲ್ಲಿಸಿದರು. ಗಾಂಧೀಜಿಯ ಆಶ್ರಮದಲ್ಲಿ ಒಂದು ಹೊಗೆ ಆಡಲಿಕ್ಕಿಲ್ಲ. ಆ ತಪೋವನಗಳ ನಿಸರ್ಗ ಶೋಭೆಯೂ ಇಲ್ಲ. ದೇಹಕ್ಕೆ ಹಿಂದಿನವರು ತೋರಿಸುತ್ತಿದ್ದ ಅಸಡ್ಡೆಯೂ ಇಲ್ಲ. ಅವರು ಜಡೆ ಗಡ್ಡ ಬಿಟ್ಟಿದ್ದರೆ ಇವರು ದಿನವೂ ಕ್ಷೌರಮಾಡಿಕೊಳ್ಳುತ್ತಾರೆ. ಆದರೆ ಯಜ್ಞಾರ್ಥ ಕರ್ಮ ಮಾತ್ರ ಮಧ್ಯ ಬಿಂದುವಾಗಿ ಹಾಗೇ ಉಳಿದಿದೆ.

ಯಜ್ಞಕ್ಕೆ ಅವರು ಕೊಟ್ಟ ಅರ್ಥಕ್ಕಿಂತಲೂ ಕಷ್ಟವಾದ ಅರ್ಥ ಇವ ರದು. ಯಜ್ಞ ಮಾಡದೆ ತಿನ್ನುವ ಸೋಮಾರಿ ಕಳ್ಳ ಎಂದಿದ್ದರವರು,

ಯಜ್ಞಕರ್ಮಕ್ಕೆ ಶರೀರಶ್ರಮ ಎಂಬರ್ಥ ಹಬ್ಬಿ ಶರೀರ ಶ್ರಮವನ್ನು ಒಂದು ವ್ರತವಾಗಿ ಮಾಡಿ ಶರೀರ ಶ್ರಮವಾಗದೆ ತಿಂದ ಅನ್ನ ಕಳ್ಳತನದ್ದು ಅಂದಿ ದಾರಿವರು, ರಷ್ಯಾದೇಶದ Boodkin ನ Bread labour—ದುಡಿದವಗೆ ಅನ್ನ–ಎಂಬ ಸಿದ್ಧಾಂತದ ಹಾಗೆ ಈ ವ್ರತ, ಪ್ರತಿಯೊಬ್ಬನೂ ತನ್ನ ಅನ್ನ ನಿಧಿಗಾಗಿ ಅಷ್ಟೋ ಇಷ್ಟೋ ದುಡಿಯಲೇಬೇಕು. ಕೈ ಕೆಸರಾದರೆ ಬಾಯಿ ಮೊಸರು ಎಂಬ ವೇದಾಂತ ಅದು, ಇದೇ ಸರೋಜಿನಿ ಹೇಳಿದ್ದು.

ಇಂಥ ಅವಿಶ್ರಾಂತ ಕರ್ಮ ಅನಾಸಕ್ತಿಗೆ, ಸತ್ಯಾರಾಧನೆಗೆ ಅಲ್ಲದೆ ಮತ್ತಾವುದಕ್ಕೂ ಸಾಧ್ಯವಲ್ಲ. ಗಾಂಧೀಜಿಗೆ ಕರ್ಮ–ಕರ್ತವ್ಯವೇ ಮುಖ್ಯ. ಅದರ ಫಲವಾಗಲಿ, ಅದಕ್ಕೆ ಸಂಬಂಧಿಸಿದ ಅಧಿಕಾರವಾಗಲಿ ಮುಖ್ಯವಲ್ಲ. ಅಧಿಕಾರ–ಹಕ್ಕು ಎಂದರೆ ಅವರಿಗೆ ನಗು ಬರುತ್ತದೆ.

ಒಂದು ಸಲ ಹೆಚ್. ಜಿ. ವೆಲ್ಸ್ 'ಮಾನವನ ಅಧಿಕಾರಗಳು'– Rights of Man–ಏನೇನು ಎಂದು ಪರಿಶೀಲಿಸಲು ಮೊದಲಿಟ್ಟು ಲೋಕಾಭಿಪ್ರಾಯವನ್ನು ಸಂಗ್ರಹಿಸುವ ಪ್ರಯತ್ನ ಮಾಡಿದ. ಗಾಂಧೀ ಜಿಗೂ ಪತ್ರ ಬರೆದ ಆ ವಿಷಯವಾಗಿ. ಗಾಂಧೀಜೀ ಅದಕ್ಕೆ ಉತ್ತರ ಬರೆ ಯುತ್ತ 'ಮನುಷ್ಯನಿಗೆ ಕರ್ತವ್ಯಗಳು ಇವೆಯೇ ವಿನಾ ಅಧಿಕಾರಗಳಿಲ್ಲ. ಕರ್ತವ್ಯ ಮಗ್ನನಾದವನಿಗೆ ಫಲದ ಯೋಚನೆ ಬೇಕಿಲ್ಲ. ಬೀಜದಿಂದ ಹಣ್ಣು ಸಿಗುವಂತೆ ಕರ್ತವ್ಯ ಪರಿಪಾಲನೆಯಿಂದ ಫಲ (ಅಧಿಕಾರ) ಮೊಳೆತು ಬಂದೇ ಬರುತ್ತದೆ. ನನಗೆ ಯಾವ ಅಧಿಕಾರವೂ ಇಲ್ಲ. ಯಾವ ಹಕ್ಕೂ ಇಲ್ಲ. ಆದರೆ ನನಗಿಂತ ಹೆಚ್ಚು ಅಧಿಕಾರ–ಹಕ್ಕು ಯಾರಿಗಿದೆ ಇಂದು ಲೋಕದಲ್ಲಿ?' ಎಂದರು.

ಅವರ ಆದರ್ಶ ತ್ಯಾಗಜೀವನ—ಯೋಗ ಜೀವನ. ಅಂಥ ಬಾಳಿಗೆ ಇದಲ್ಲದೆ ಮತ್ತಾವ ಭಾವನೆ ತಳಹದಿಯಾಗಿದ್ದೀತು?

ಆದುದರಿಂದಲೇ ಆಶ್ರಮದಲ್ಲಿ ಅಂದ ಕಡಮೆ. ಆ ದೊಡ್ಡ ಆವರಣ ದಲ್ಲಿ ಲಕ್ಷಣವಾದ ತೋಟವಾಗಲಿ, ಚೆಂದವಾದ ಜಗಲಿ ಕಟ್ಟೆಯಾಗಲಿ ಇಲ್ಲ. ಸರಿಯಾದ ಒಂದು ಕಟ್ಟಡವಾದರೂ ಇಲ್ಲ. ಬೋಳು ಬೋಳು ಅಂಗಳ. ಒಂದಾದರೂ ಮರವಿಲ್ಲ ಆ ಉರಿಬಿಸಲಿಗೆ, ನಾಲ್ಕೇ ನಾಲ್ಕು ಗುಡಿಸಲು.

ಅಲ್ಲೇ ಒಂದು ಭಾವಿ. ಮಗ್ಗುಲಲ್ಲಿ ಕೈತೋಟ, ನಾಲ್ಕೆಕರೆ ಪೈರು, ಅಂಗಳ ದಲ್ಲೇ ಮೇವಿನ ಬಣವೆ.

ಇದೇ ಗಾಂಧೀಜಿಯ ಆಶ್ರಮ. ಆಧುನಿಕ ಭಾರತದ ಆನಂದ ತೀರ್ಥ. ಇಲ್ಲಿ “ ಸ್ವದೇಶಿಯೇ ವ್ರತ, ರಾಟಿಯೇ ಧ್ವಜ. ಅನಾಸಕ್ತಿಯೇ ಮಂತ್ರ, ಸತ್ಯವೇ ದೇವರು.”

ಇಂಥ ಜೀವ ಮಹಾಜೀವ. ಇಂಥ ಆತ್ಮ ಮಹಾ ಆತ್ಮ. ಇಂಥ ಜೀವದೊಡನೆ ಒಂದು ದಿನ ಕಳೆವುದೂ ಒಂದು ಯೋಗ, ಆನಂದ. ಹೂವಿ ನಿಂದಲ್ಲವೆ ನಾರು ಮುಡಿಗೇರುವುದು.





ಗಾಂಧೀಜಿಯ ‘ಪರ್ಣಕುಟಿ’

# ಆಶ್ರಮದಲ್ಲಿ

ಗಾಂಧೀಜಿಯ 'ಪರ್ಣಕುಟಿ' ಅಷ್ಟೇನೂ ದೊಡ್ಡದಲ್ಲ. ೬—೭ ಗಜದಷ್ಟು ಅಗಲವಿದೆ. ಅಷ್ಟರಲ್ಲೇ ಒಂದೆರಡು ಅಡ್ಡಗೋಡೆ, ಒಂದು ಬಚ್ಚಲು. ಗುಡಿಸಲು ತುಂಬ ಕಾಗದಗಳ ಕಡತಗಳೇ

ಪರ್ಣಕುಟಿಯ ಹೊರಗೋಡೆಗೆ ಒಂದೆರಡು ಒರಟು ಒರಟಾದ ಚಿತ್ರಗಳನ್ನು ಕೆತ್ತಿದಾರೆ. ಅದು ಗಮನೀಯವಾಗಿದೆ. ಬಿದುರಿನ ತಡಕೆಗಳಿಗೆ ಮಣ್ಣು ಮೆತ್ತಿ ಕಟ್ಟಿದ ಗೋಡೆಗಳು ಇವು. ಅದರ ಮೇಲೆ ಅದೇ ಮಣ್ಣಿನಲ್ಲಿಯೆ ಕುಟಿಯ ಬಲಭಾಗದ ಗೋಡೆಯ ಮೇಲೆ, ಕೆಳಗಡೆ ಗುಡಿಸಲಿನ ಮಾದರಿಯೊಂದನ್ನು ರಚಿಸಿದಾರೆ. ಮೇಲ್ಭಾಗದಲ್ಲಿ ಕಿಟಕಿಯ ಮೇಲೆ ತಾಳೆಯ ಮರವಿದೆ. ಕಿಟಕಿಯ ಎರಡೂ ಪಕ್ಕಗಳಲ್ಲಿ ರಾಟೆಗಳಿವೆ. ಕಿಟಕಿಗೂ ಕೆಳಗಿರುವ ಗುಡಿಸಲಿನ ಮಾದರಿಗೂ ನಡುವೆ ಜೇನುಹುಳಗಳು ಹಾರಾಡುತ್ತಿರುವಂತೆ ಚಿತ್ರಿಸಿದ್ದಾರೆ.

ಈ ದೃಶ್ಯ ಸ್ವಲ್ಪ ಅಸ್ಪಷ್ಟವಾಗಿ ಒಳಗೂ ಕಾಣುತ್ತದೆ. ಗಾಂಧೀಜೀ ಕೂಡುವ ಸ್ಥಳದಲ್ಲಿ ಇದುರಿನ ಗೋಡೆಯ ಮೇಲೆ ಮಸಕಾಗಿ ಇದೇ ಚಿತ್ರವಿದೆ.

ಗಾಂಧೀಜಿಯ ಗ್ರಾಮಜೀವನದ ಗುರಿಯ ಸಂಕೇತ ಈ ಚಿತ್ರ. ಗಾಂಧೀಜಿಯ ಕನಸಿನ ಹಳ್ಳಿಗಳಲ್ಲಿ ಮಂಗಳೂರು ಹೆಂಚಿನ ಬಂಗಲೆಗಳಿಲ್ಲ. ಅಚ್ಚುಕಟ್ಟಾದ, ಮಾಟವಾದ ಗುಡಿಸಲುಗಳು. ಜೀವನದ ಮಟ್ಟವನ್ನು ಏರಿಸುವುದೆಂದರೆ ಜನರ ಕಣ್ಣೆದಿರಿಗೆ ಬಂಗಲೆ, ವಿದ್ಯುದ್ದೀಪ, ಕುರ್ಚಿ ಮೇಜು, ಕಾಫೀ, ಚಹಾ—ಮೊದಲಾದವು ಬಂದು ನಿಲ್ಲುತ್ತವೆ. ಮೋಕ್ಷಗುಂಡಂ ವಿಶ್ವೇಶ್ವರಯ್ಯನವರಂಥ ನಿರ್ಮಾಣವಾದಿಗಳು (reconstructionist) ಹಿಂದುಸ್ಥಾನದಲ್ಲಿ ಕಡಿಮೆ. ಹಿಂದುಸ್ಥಾನದ ಭವಿಷ್ಯದ ಸುಂದರ ಸ್ವಪ್ನಗಳನ್ನು ಅವರ ಹಾಗೆ ಕಟ್ಟಿದವರು ಯಾರೂ ಇಲ್ಲ. ಅವರು ಮೈಸೂರಿನಲ್ಲಿ ದಿವಾನರಾಗಿದ್ದಾಗ ಗ್ರಾಮಪುನರುಜ್ಜೀವನದ ಕಾರ್ಯವನ್ನು ಮೊದಲು ಮಾಡಿದರು. ಆ ಮಹಾಕಾರ್ಯ ಅಲ್ಲಿಗೇ ನಿಂತುದು ಮೈಸೂರಿನವರ—

ಕನ್ನಡಿಗರ–ದುರದೃಷ್ಟ. ಅವರ ಆಸೆಗಳಲ್ಲಿ ಹಳ್ಳಿಯಲ್ಲಿ ಪ್ರತಿಯೊಬ್ಬನಿಗೂ ಮಂಗಳೂರು ಹೆಂಚಿನ ಮನೆ ಇರಬೇಕೆಂಬುದೊಂದು. ಹಾಗೆ ಅವರು ಹೇಳುತ್ತಿದ್ದರು.

ವಿಶ್ವೇಶ್ವರಯ್ಯನವರ, ಅವರಂತೆ ಲೆಕ್ಕ ಹಾಕುವ ಜನರ ವಿಚಾರಕೂ, ಗಾಂಧೀಜಿಯ ಕನಸುಗಳಿಗೂ ಸ್ವಲ್ಪ ಭೇದವಿದೆ. 'ದರಿದ್ರಸ್ಯ ಕೋ ಧರ್ಮಃ?' ಎಂಬುದು ಅವರ ಪ್ರಶ್ನೆಯಾದರೆ, 'Man does not live by bread alone' ಎಂಬುದು ಇವರ ಪಂಥವಾಗಿದೆ. ಹಳ್ಳಿಯ ಸರಲ ಜೀವನದಲ್ಲಿ ಸಂಸ್ಕೃತಿಯ ಮಟ್ಟವನ್ನು ಏರಿಸಿ, ಸ್ವಾವಲಂಬನ ಶಕ್ತಿಯನ್ನು ಬೆಳೆಸಿ, ಸಾಮಾಜಿಕ ಅಹಿಂಸೆಯನ್ನು ನಾಡಿನಲ್ಲಿ ಬೆಳೆಯಿಸುವುದು ಇವರ ಉದ್ದೇಶ. ಅಂತೇ ಸಾಧ್ಯವಿದ್ದಷ್ಟೂ ಯಂತ್ರೋಪಯೋಗಕ್ಕೆ ತಡೆ ಹಾಕುತ್ತಾರೆ. ಹಳ್ಳಿಗಳಲ್ಲಿ ಬಂಗಲೆ ಕಟ್ಟಿ, ಹೆಂಚು ಸಿಮೆಂಟುಗಳ ಬಲೆಗೆ ಜನರನ್ನು ಸಿಗಿಸಿ, ಪಾಲಘಾಟಿನ ತೇಗದ ಕಟ್ಟಿಗೆಯನ್ನು ಸರಿಮಾಡಿ ಮೈಸೂರಿನ ಬಡಗಿ ಮಾಡಿದ ಕುರ್ಚಿಗಳನ್ನೋ, 'ಸುಂದರದಾಸ ಕಂಪನಿ'ಯ ಕುರ್ಚಿಗಳನ್ನೋ ತರಿಸಿ, ಹಳ್ಳಿಗಳ ಸ್ವಾವಲಂಬನ ಶಕ್ತಿಯನ್ನು ಕುಗ್ಗಿಸುವುದು ಗಾಂಧೀಜಿಗೆ ಸರಿಕಾಣುವುದಿಲ್ಲ. ಎಲ್ಲೆಲ್ಲಿ ಏನೇನು ಪದಾರ್ಥ ಸಿಗುತ್ತವೆಯೋ ಅಲ್ಲಲ್ಲಿ ಅವುಗಳಿಂದಲೇ ಜೀವನನಿರ್ವಾಹ ಮಾಡಬೇಕು. ಹೊರಗಿನಿಂದ ತಂದು ಬಾಳನ್ನು ಸೊಗಸು ಮಾಡಿಕೊಳ್ಳುವ ಚಟ ಆತ್ಮವಿಘಾತಕವಾದುದು. ಗಾಂಧೀಜಿಯ ಗ್ರಾಮೋದ್ಧಾರ ಕಾರ್ಯದಲ್ಲಿ ಇದು ಮುಖ್ಯ ಸೂತ್ರ.

ಅಂತೇ ಮಾಟವಾದ ಗುಡಿಸಲು ಅವರ ಮನಸಿಗೆ ಹಿಡಿಸುತ್ತದೆ. ಮಗನ್‌ವಾಡಿಯ ಗುಡಿಸಲುಗಳಂಥವಾದರೆ ಸಾಕು, ಪರ್ಣಕುಟಿಯ ಚಿತ್ರದ ಅರ್ಥ ಅದು.

ರಾಟೆ ಮೊದಲು ಸ್ವದೇಶೀ ವಸ್ತ್ರೋತ್ಪತ್ತಿ, ಪರದೇಶೀ ಬಹಿಷ್ಕಾರಗಳ ಸಾಧನವಾಗಿತ್ತು. ಈಗ ಗ್ರಾಮಪುನರುಜ್ಜೀವನದಲ್ಲಿ ಹಳ್ಳಿಯ ಕೈಗಾರಿಕೆಗಳ ಸಂಕೇತವಾಗಿದೆ. ಯಂತ್ರದ ಬಟ್ಟೆ ಹೇಗೆ ನಾಡಿನ ಸುಖ ಜೀವನಕ್ಕೆ ಅಹಿತವೋ ಹಾಗೆ ಗಿರಣಿ ಅಕ್ಕಿ, ಗಿರಣಿ ಹಿಟ್ಟು ಮೊದಲಾದವು ಜನರ ಆರೋಗ್ಯ ಜೀವನಕ್ಕೆ ಅಹಿತ. ಮನೆಯಲ್ಲಿ ಕುಟ್ಟಿದ ಅಕ್ಕಿ, ಮನೆಯಲ್ಲಿ

ಬೀಸಿದ ಹಿಟ್ಟು, ಹಿತ್ತಲಲ್ಲಿ ಬೆಳೆದ ಕಾಯಿಪಲ್ಯಗಳು ರಾಟೆಯ ಜೊತೆಯಲ್ಲೇ ಬರುತ್ತವೆ. ನಮ್ಮೂರಿನ ಸಾಬೂನು, ನಮ್ಮೂರಿನ ಎಣ್ಣೆ, ಕಾಗದ—ಎಲ್ಲದಕ್ಕೂ ರಾಟೆ ಸಂಕೇತ.

ಮೇಲೆ ಕಾಣುವ ತಾಳೆಯ ಗಿಡ ದೊಡ್ಡದೊಂದು ಸಾಮಾಜಿಕ ಕ್ರಾಂತಿಯ ಗುರುತು. ಅನಾದಿಯಾಗಿ ನಡೆದು ಬಂದ ಮದ್ಯಪಾನ ನಿರೋಧದ ಸಂಕಲ್ಪ ಅದು. ಪಾನನಿರೋಧಕ್ಕಾಗಿ ತಾಳೆಯ ಮರವನ್ನು ಕಡಿದು ಹಾಕುವುದಿಲ್ಲ ಗಾಂಧೀಜೀ. ಅದನ್ನು ಬೆಲ್ಲಕ್ಕಾಗಿ ಉಪಯೋಗಿಸುತ್ತಾರೆ. ಕಬ್ಬು ಸಕ್ಕರೆಗಾಗಲಿ, ತಾಳೆಗಿಡ ಬೆಲ್ಲಕ್ಕಾಗಲಿ. ಅದರ ಇತರ ಉಪಯೋಗಗಳೂ ಕಡಮೆಯಿಲ್ಲ. ಜನರಲ್ಲಿ ತಾಳೆಯ ಗಿಡ, ಈಚಲ ಗಿಡಗಳ ಬಗ್ಗೆ ಬೇರೊಂದು ದೃಷ್ಟಿ, ಹೊಸದೊಂದು ಭಾವನೆ ಉಂಟು ಮಾಡುವ ಸಂಕಲ್ಪದ ಪ್ರತಿಧ್ವನಿ ಆ ಚಿತ್ರ.

ಎಲ್ಲಕ್ಕಿಂತ ವಿಚಿತ್ರವಾದುದು ಅಲ್ಲಿರುವ ಜೇನುಹುಳಗಳು. ಗಾಂಧೀಜಿಯ ಜೀವನ ಸಿದ್ಧಾಂತದಲ್ಲಿ ಜೇನು ಹುಳಕ್ಕೊಂದು ವಿಶೇಷ ಸ್ಥಾನವಿದೆ. ಮಾನವಕೋಟಿಯ ಪ್ರಗತಿಮಾರ್ಗದಲ್ಲಿ ಜೇನುನೊಣ ಒಂದು ಮುಖ್ಯವಾದ 'ಮಜಲು' ಎಂದು ಅವರ ಅಭಿಪ್ರಾಯ. ಹಿಂಸಾಪರನಾಗಿ ಮಾಂಸಭಕ್ಷಕನಾಗಿ ರಾಕ್ಷಸನಂತಿದ್ದ ಮನುಷ್ಯನಿಗೆ ಮೊದಲು ಅಹಿಂಸೆ, ಪ್ರೇಮಗಳನ್ನು ಕಲಿಸಿದ ಕೀರ್ತಿ ಗೋಮಾತೆಯದು. ಇತ್ತ ಹಾಲು, ಅತ್ತ ಕಾಳು; ಹೀಗೆ ಎರಡೂ ಕೈಯಿಂದ ಮಾನವಕೋಟಿಗೆ ಅನ್ನ ನೀಡಿ, ಆಕೆ ಮನುಷ್ಯನನ್ನು ಸಸ್ಯಾಹಾರಿಯನ್ನಾಗಿ ಮಾಡಿದಳು. ಹಿಡಿ ಹುಲ್ಲನ್ನು ತಿಂದು ಅಮೃತವನ್ನೇ ಕೊಟ್ಟು ಮನುಷ್ಯನನ್ನು ಹಿಂಸೆಯ ಚಕ್ರತೀರ್ಥ (ಸುಳಿಮಡುವು)ದಿಂದ ತಪ್ಪಿಸಿ ಪ್ರಗತಿಪ್ರವಾಹದಲ್ಲಿ ಮುಂದೆ ಸಾಗಿಸಿದಳು. ಗಾಂಧೀಜಿಗೆ ಈ ದೃಶ್ಯ ಕಣ್ಣಿಗೆ ಕಟ್ಟಿದಂತಿರಬೇಕು, 'ಹಸು ಉದಾತ್ತಕರುಣೆಯ ಕಾವ್ಯ' ಎಂದು ಹೇಳಿದಾಗ. ಆಗಿನಿಂದಲೂ ಗೋಸೇವೆಯ ಬಗ್ಗೆ ಅವರಿಗೆ ಬಹಳ ಉತ್ಸಾಹ.

ಜೇನುನೊಣ ಆ ಪ್ರಗತಿಯಲ್ಲಿ ಎರಡನೆಯ ಹೆಜ್ಜೆ. ಆಕಳು ಹುಲ್ಲಿನಲ್ಲಿ ಹಾಲು ಹಿಂಡಿದರೆ ಜೇನುನೊಣ ಹೂವಿನಲ್ಲಿ ಜೇನು ತೆಗೆಯುತ್ತದೆ.

---

'The cow is a poem of pity'

ಈ ಹೂವಿನ ಹಾಲು ಹುಲ್ಲಿನ ಹಾಲಿಗಿಂತಲೂ ಹೆಚ್ಚು ಕ್ರಾಂತಿಕಾರಿ. ಜೇನು ತುಪ್ಪಕ್ಕೆ ನಮ್ಮ ಹಿರಿಯರು ಎಷ್ಟು ಬೆಲೆ ಕೊಡುತ್ತಿದ್ದರೆಂಬುದನ್ನು ಯೋಚಿಸಿಕೊಂಡರೆ ಈ ನೊಣ ಸಾಕುವುದರ ಅಗತ್ಯ ಗೊತ್ತಾಗುತ್ತದೆ. ಮಧು—ನಮ್ಮ ಹಿರಿಯರ ಎಲ್ಲ ಧಾರ್ಮಿಕಕಾರ್ಯಗಳ ಮುಖ್ಯಾಂಗವಾಗಿತ್ತು. ಹಳ್ಳಿಗಳಲ್ಲಿ ಈಗಲೂ ಜೇನುನೊಣಗಳ ಪಾಲನೆ ಬೆಳೆಯಬೇಕೆಂದೂ ಹಳ್ಳಿಗರ ಆಹಾರದಲ್ಲಿ ಜೇನು ಹೆಚ್ಚು ಹೆಚ್ಚಾಗಿ ಬೆರೆಯುತ್ತ ಬರಬೇಕೆಂದೂ ಗಾಂಧೀಜಿಯ ಆಸೆ. ಅದಕ್ಕಾಗಿ ಮಗನ್‌ವಾಡಿಯಲ್ಲಿ ಇದೊಂದು ಶಾಖೆಯೇ ಆಗಿದೆ.

'ತಾಳೆಯ ಗಿಡದಲ್ಲಿ ನೀರಾಪಾನದ ಸಂಕೇತವೂ ಇರಬೇಕು' ಎಂದು ನನ್ನ ಗೆಳೆಯರು ವಾದಿಸಿದಾರೆ. ಅಲ್ಲವೆನ್ನುವುದು ಸುಲಭ. ನೀರಾಪಾನ (ಸಿಹಿ ಹೆಂಡ)ವು ಮೈಗೊಳ್ಳಿಯುದೆಂದು ಗಾಂಧೀಜೀ ಅನೇಕ ಸಲ ಹೇಳಿದಾರೆ. ಆದರೆ, ಈ ಪ್ರಶ್ನೆಯ ಹಿಂದಿನ ಮನೋಭಾವ ನೀರಾಪಾನವು ಜೀವನಕ್ಕೆ ಅತ್ಯಗತ್ಯವೆಂದು ಒಂದು ಸಿದ್ಧಾಂತವನ್ನು ಕಲ್ಪಿಸಿಕೊಂಡದ್ದಾಗಿದೆ. ವರ್ಧಾ ವಾತಾವರಣದಲ್ಲಿ ನನಗೆ ಈ ಸಿದ್ಧಾಂತವನ್ನು ಒಪ್ಪಿಕೊಳ್ಳಲು ಆಧಾರ ಸಿಗಲಿಲ್ಲ. ಗಾಂಧೀಜೀ ಪ್ರಯೋಗಪ್ರಿಯರು. ನೀರಾಪಾನವೂ ಅಂಥವುಗಳಲ್ಲಿ ಒಂದು. ಅಷ್ಟೇ ಅಲ್ಲ. ತಾಳೆಯ ಬೆಲ್ಲ ಬೇಕಾದರೆ ನೀರಾದ ಮಾತೇ ಎತ್ತುವ ಹಾಗೆ ಇಲ್ಲವಲ್ಲ.

ಈ ಮಾತು ಬಂದು ಕಾಕಾ ಕಾಲೇಲಕರರು ನೆನಪಿಗೆ ಬರುತ್ತಾರೆ. ಈ ಇಪ್ಪತ್ತು ವರ್ಷಗಳಿಂದಲೂ ಕಾಲೇಲಕರರು ಗಾಂಧೀಜಿಯ ಸಹಚಾರಿಗಳಾಗಿದಾರೆ. ಗಾಂಧೀಜಿಯ ಬಲಗೈಯಾಗಿದ್ದಾರೆ. ರಾಷ್ಟ್ರೀಯ ಶಿಕ್ಷಣದ ಬಗ್ಗೆ ಕಾಲೇಲಕರರು ಹೆಚ್ಚಾಗಿ ದುಡಿದವರು. ಗುಜರಾಥ ವಿದ್ಯಾಪೀಠಕ್ಕೆ ಸ್ಥಾನಪತಿಗಳಾಗಿದ್ದರು. ವರ್ಧಾ ಯೋಜನೆಯ ನಿರ್ಮಾಪಕರಲ್ಲಿ ಒಬ್ಬರು. ಮಹಿಲಾಶ್ರಮಕ್ಕೂ ಅವರೇ ಹಿರಿಯರು. ಗಾಂಧೀಜಿಯ ತತ್ವ ಪ್ರಚಾರಕ್ಕಾಗಿ ಸತತವಾಗಿ ದುಡಿದವರಲ್ಲಿ ದತ್ತಾತ್ರೇಯ ಬಾಲಕೃಷ್ಣ ಕಾಲೇಲಕರರು ಮುಖ್ಯರು.

ಕಾಲೇಲಕರರು ಕಾರವಾರದವರು. ಕನ್ನಡಿಗರಾಗಿರದಿದ್ದರೂ ಕರ್ನಾಟಕದವರು. ಅವರ ತಾಯಿನುಡಿ ಕೊಂಕಣಿ, ಅವರ ಒಲವು ಹಿಂದಿಯ.

ಕಡೆಗೆ. ಮರಾಠೀ ವಾಙ್ಮಯದಲ್ಲಿ ಅವರಿಗೆ ಸ್ಥಾನವಿಲ್ಲ. ಆದರೆ ಗುಜರಾತಿನ ಆಧುನಿಕ ಸಾಹಿತ್ಯವನ್ನು ಬೆಳೆಸುವುದಕ್ಕೆ ಕಾಲೇಲಕರರು ಬಹಳ ದುಡಿದಿದಾರೆ. ರಾಜಕೀಯ ದೃಷ್ಟಿ, ದೀರ್ಘದರ್ಶಿತ್ವಗಳಿದ್ದರೂ ರಾಜಕೀಯದ ಗೊಂದಲದಲ್ಲಿ ಅವರು ಬಿದ್ದಿಲ್ಲ. ಗಾಂಧೀಸೇವಾ ಸಂಘಕ್ಕೆ ಕಿಶೋರಲಾಲರು ಹಿರಿಯರು. ಆದರೆ ಸಂಘದ ಮುಖಪತ್ರವಾದ 'ಸರ್ವೋದಯ'ಕ್ಕೆ ಕಾಲೇಲಕರರು ಸಂಪಾದಕರು. ಹೀಗೆ ಇವರ ಜೀವನವೆಲ್ಲ ಪ್ರಚಾರ, ಸಾಹಿತ್ಯ, ತಾತ್ವಿಕ ವಿವೇಚನೆಯಲ್ಲಿ ತುಂಬಿ ಬಂದಿದೆ.

ಗಾಂಧೀಜೀ ಹಿಂದುಸ್ಥಾನಕ್ಕೆ ಬರುವುದಕ್ಕಿಂತ ಮೊದಲೇ ಇವರಿಗೆ ರಾಷ್ಟ್ರೀಯ ಶಿಕ್ಷಣದ ಒಲವಿತ್ತು. ಕೆಲವು ಪ್ರಯತ್ನಗಳನ್ನೂ ಮಾಡಿದರು. ಗಾಂಧೀಜೀ ಬಂದ ಮೇಲೆ ಈ ಭರತನಿಗೊಬ್ಬ ರಾಮ ಸಿಕ್ಕಂತಾಯಿತು. ಕೂಡಲೇ ಸಾಬರ್ಮತಿಗೆ ಹೋದರು. ಗಾಂಧೀಜಿಯ ಸ್ವದೇಶೀ ತತ್ವವನ್ನು ಪ್ರಚಾರಮಾಡಿದರು. ಹಿಂದೂಸ್ಥಾನೀ ರಾಷ್ಟ್ರಭಾಷೆಯಾಗಬೇಕೆಂದು ಗಾಂಧೀಜೀ ಅಭಿಪ್ರಾಯಪಟ್ಟರು. ಸರಿ, ಕಾಲೇಲಕರರು ಹಿಂದೀ ಅಧ್ಯಯನಕ್ಕೆ ಮೊದಲಿಟ್ಟರು. ಮುಂದೆ ಹಿಂದೀಪ್ರಚಾರವನ್ನೇ ತಮ್ಮ ಕಾರ್ಯಕ್ರಮವನ್ನಾಗಿ ಸ್ವೀಕರಿಸಿದರು.

ಕಾಲೇಲಕರರು ಗಾಂಧೀ ಜನರಿಗೆ ಕಾಕಾಸಾಹೇಬ. ಅದೊಂದು ಪ್ರೀತಿಯ ಹೆಸರು. ಹೀಗೆ ಕೌಟುಂಬಿಕ ಪ್ರೇಮದ ಸಂಕೇತಗಳನ್ನು ಸ್ನೇಹದಲ್ಲಿ ಬಳಸುವುದೂ ಒಂದು ರೂಢಿ. ಸಾಬರ್ಮತಿ ಆಶ್ರಮದಲ್ಲಿ ಗಾಂಧೀಜೀ ಎಲ್ಲರಿಗೂ ಬಾಪು (ತಂದೆ) ಆಗಿದ್ದರು. ಸ್ವಲ್ಪ ಮಟ್ಟಿಗೆ ಅವರೊಡನೆ ಪರಿಚಯವಾದರೆ ಸಾಕು, ಎಲ್ಲರೂ ಅವರನ್ನು ಬಾಪು ಎಂದೇ ಕರೆಯುತ್ತಾರೆ. ಇವರು ಬಾಪು ಆದರೆ ಕಾಲೇಲಕರರು ಕಾಕಾಸಾಹೇಬ.

ಕಾಕಾಸಾಹೇಬರು ಮಹಾರಾಷ್ಟ್ರದವರಾದರೂ ಭಾರತೀಯರು. ತಮ್ಮ ಜನಕ್ಕೆ ಒಂದು ಬಗೆಯ ಅಪವಾದ ಇವರು. ಬೇರೆ ಪ್ರಾಂತಗಳಲ್ಲಿ ನೆಲೆಸಿದ ಮಹಾರಾಷ್ಟ್ರರು ಅಲ್ಲಿ ತಮ್ಮದೇ ಒಂದು ಬಾವುಟ ನೆಡುವ ರೂಢಿ ಇದೆ. ಮೈಸೂರಿನಲ್ಲೂ ಮಹಾರಾಷ್ಟ್ರ ಮಂಡಲಗಳಿವೆ. ಆದರೆ ಕಾಕಾಸಾಹೇಬರು ಗುಜರಾತಿನೊಡನೆ ಬೆರೆತು ಹೋದ ಹಾಗೆ, ಈ ವಿಲೀನ ವಿದ್ಯೆಯಲ್ಲಿ ನಿಷ್ಣಾತರಾದ ಕನ್ನಡಿಗರಿಗೂ ಸಾಧ್ಯವಿಲ್ಲ. ಅವರ ಮಗ

ಸತೀಶ ಕಾಲೇಲಕರ ವೊನ್ನೆ ವಿಲಾಯತಿಯಿಂದ ಬಂದರು. ಭಾವನಗರ ದಲ್ಲಿ ಅವರಿಗೆ ಈಗ ಮದುವೆ. ಹೆಣ್ಣು ಗುಜರಾತಿ. ಗಂಡೂ ಗುಜರಾತಿಯೇ ಎನ್ನಬಹುದು.

ಕಾಕಾಸಾಹೇಬರು ಇರುವುದು ವರ್ಧಾದಲ್ಲಿ. ಅಲ್ಲೇ ಅವರ ಹಿಂದೀ ಪ್ರಚಾರ ಸಮಿತಿ. ಅಲ್ಲೇ ಅವರ 'ಸರ್ವೋದಯ' 'ಸಬಕೀ ಬೋಲೀ' ಗಳ ಕಾರ್ಯಾಲಯ. ಮಹಿಳಾಶ್ರಮದ ಹತ್ತಿರ ಅವರ ವಾಸ. ಅದರಲ್ಲೇ ಹಿಂದೀ ಅಧ್ಯಯನಮಂದಿರ. ಬೇರೆಬೇರೆ ಪ್ರಾಂತದ ಕೆಲಸಗಾರರು ಹಿಂದೀ ಕಲಿಯಲು ಇಲ್ಲಿಗೆ ಬರುತ್ತಾರೆ.

ಹಿಂದೀ ಪ್ರಚಾರದಲ್ಲಿ ಇವರಿಗೆ ನೆರವಾಗಿ ದುಡಿದವರು ಶ್ರೀಮನ್ನಾರಾಯಣ ಅಗರವಾಲ. ಇವರು ಜಮುನಾಲಾಲರ ಅಳಿಯ. ಸಂಯುಕ್ತ ಪ್ರಾಂತದವರು. ವರ್ಧಾದಲ್ಲಿ ನವಭಾರತ ವಿದ್ಯಾಲಯದ ಪ್ರಧಾನರಾಗಿ ಇದ್ದಾರೆ. ಬಹು ಮೆದುವಾದ ಸ್ವಭಾವ. ತಿಳುವಾದ ಮನಸ್ಸು. ಇಂಗ್ಲೆಂಡಿಗೆ ಐ.ಸಿ.ಯಸ್.ಗಾಗಿ ಹೋಗಿದ್ದರು. ಸಫಲರಾಗಿಲ್ಲವೆಂದು ಕಾಣುತ್ತದೆ. ಇಂಗ್ಲೀಷಿನಲ್ಲಿ ಒಳ್ಳೇ ಬರೆಹಗಾರರು. ಅವರ ಬರೆಹಗಳನ್ನು ನೋಡಿ ಗಾಂಧೀಜೀ ಹಿಂದೀಯಲ್ಲಿ ಬರೆಯುವಂತೆ ಪ್ರೋತ್ಸಾಹಿಸಿದರು. ಈಗ ಶ್ರೀಮನ್ನಾರಾಯಣಜೀ ಹಿಂದೀಯಲ್ಲಿ ಒಳ್ಳೇ ಕವಿಗಳು.

ಆಶ್ರಮದ ಈ ಗಂಭೀರವಾತಾವರಣದಲ್ಲಿ ಕನೂ ಒಂದು ಮೃದು ಸ್ವರ, ಒಂದು ವಿನೋದ. ಅವನ ಆಟಪಾಟಗಳೇ ಮುದುಕಿ ಕಸ್ತೂರಿಬಾಗೆ ಒಂದು ಜಗತ್ತು. ಆಕೆ ಅಡಿಗೆಮನೆಯಲ್ಲಿ ಕೆಲಸಮಾಡುವಾಗ ಹೋಗಿ ಕಾಲುಕೈಗೆ ತೊಡರಿಕೊಳ್ಳುತ್ತಾನೆ. ಮರುಗಳಿಗೆಯಲ್ಲಿ ಗೋಶಾಲೆಯಲ್ಲಿ ಕರುಗಳ ನಡುವೆ ಆಡುತ್ತಿರುತ್ತಾನೆ. ಗಾಂಧೀಜೀ ಗಾಳೀ ಸವಾರಿಗೆ ಹೊರಟರೆ ಎಲ್ಲರಿಗಿಂತ ಮೊದಲು ಅವನು ಸಿದ್ಧ. ನಗುತ್ತ ಕೆಲೆಯುತ್ತ ಆ ಗಾಳಿಯಲ್ಲಿ ಉಲ್ಲಾಸವನ್ನು ಬೆರೆಸಿಬಿಡುತ್ತಾನೆ.

---

ಈಚೆಗೆ ಶ್ರೀಮನ್ನಾರಾಯಣರ ಬರೆವಣಿಗೆ ದೇಶಕ್ಕೆ ಹೆಚ್ಚು ಪರಿಚಿತವಾಗಿದೆ. 'ಗಾಂಧೀ ಯೋಜನೆ', 'ಗಾಂಧೀ ರಾಜ್ಯಾಂಗ'ಗಳನ್ನು ಬರೆದು ಗಾಂಧೀ ವಿಚಾರ ಧಾರೆಯನ್ನು ಲೋಕದ ಮುಂದಿಟ್ಟಿದಾರೆ. ಆಗಾಗ ಹರಿಜನಕ್ಕೂ ಬರೆಯುತ್ತಿದ್ದರು.

ಇವನಲ್ಲದೆ ಆಶ್ರಮದ ಗಾಳಿಯಲ್ಲಿ ಸ್ವಲ್ಪ ವೈವಿಧ್ಯ ಬೆರೆಸಲು ಇತರ ಸನ್ನಿವೇಶಗಳೂ ಇವೆ. ಆಶ್ರಮದ ಅತಿಥಿ ಭವನದ ಚಪ್ಪರದಲ್ಲಿ ಭನಸಾಲಿ ಭಾಯಿ ಕೂತಿರುವುದನ್ನು ನೋಡಬಹುದು. ಅವರ ಮುಗ್ಗುಲಲ್ಲಿ ಬೇವಿನ ಎಲೆಯ ರಾಶಿಯೊಂದು ಬಿದ್ದಿರುತ್ತದೆ. ಆಗಾಗ ಆ ಸೊಪ್ಪನ್ನು ಅವರು ಮೆಲ್ಲುತ್ತಾರೆ. ಯಾರೊಡನೆಯೂ ಮಾತಾಡುವುದಿಲ್ಲ.

ಕೆಲವು ದಿನಗಳಿಂದ ಚೀನದ ಬೌದ್ಧಬಿಕ್ಷು ಒಬ್ಬ ಇಲ್ಲಿ ಸೇರಿದಾನೆ. ಅವನ ನುಣ್ಣಗೆ ಮಿಂಚುವ ತಲೆ, ಹೊಸ ರೀತಿಯ ಮೋರೆ, ಅವನ ಕೈಯಲ್ಲಿಯ ಜಾಗಟೆ—ನೋಡುವವರ ಮನಸ್ಸಿಗೆ ಸ್ವಲ್ಪ ಮೋಜು ಕೊಡುತ್ತದೆ. ಯಾವಾಗಲಾದರೂ ಆ ಜಾಗಟೆ ಬಡಿಯುತ್ತ ಅವನು 'ಓಂ, ಮಣಿಪದ್ಮೋಽಹಂ' ಎಂದು ಅಸ್ಪಷ್ಟವಾಗಿ ಹೇಳುತ್ತಿರುವಾಗ ತಿಬೇಟಿನ ಲಾಮಾಗಳ ಬಗ್ಗೆ ನೋಡಿದ್ದ ಸಿನಿಮಾ ಪಟಗಳು ನೆನಪಿಗೆ ಬರುತ್ತವೆ.

ಗಾಂಧೀಜಿಗೆ ಕೆಲವು ಕಾಲದಿಂದ ಮೈ ಚೆನ್ನಾಗಿಲ್ಲ. ನಾಡಿಯ ವೇಗ (ರಕ್ತದ ಒತ್ತಡ) ಆಗಾಗ ಹೆಚ್ಚುತ್ತಲೇ ಇರುತ್ತದೆ. ಅನೇಕ ಜನ ವೈದ್ಯರು ತಾವೇ ಬಂದು ಅವರನ್ನು ಪರೀಕ್ಷಿಸಿ ಔಷಧಿ ಹೇಳುತ್ತಾರೆ. ಗಾಂಧೀಜಿಗೆ ಬಡವರ ಔಷಧಿಬೇಕು. ಶ್ರೀಮಂತರಂತೆ ಭಾರಿ ಮದ್ದುಗಳನ್ನು ಬಡವ ಹೇಗೆ ನುಂಗಬಲ್ಲ? ಬೊಂಬಾಯಿನ ಜೀವರಾಜ ಮೆಹತಾ ಇವರಿಗೆ ಮೊದಲಿನಿಂದ ವೈದ್ಯರು. ಗಾಂಧೀಜೀ ಎಷ್ಟು ಹಟಮಾರಿ ರೋಗಿಯೆಂಬು ದನ್ನು ಅವರು ಹೇಳಬಲ್ಲರು. ಔಷಧಗಳ ಬಗ್ಗೆ ಚರ್ಚೆ ಮಾಡದೆ ಅವರು ಎಂದೂ ಅವುಗಳ ಸೇವನೆಗೊಪ್ಪುವುದಿಲ್ಲ. ರಕ್ತದ ವೇಗ ಹೆಚ್ಚಾದಾಗ ಮಂಜುಗಡ್ಡೆಯನ್ನು ತಲೆಯ ಮೇಲಿಡಬೇಕೆಂದು ಮೆಹತಾರ ಸೂಚನೆ. ಮಂಜು ಹಳ್ಳಿಗನಿಗೆ ಸಿಗುತ್ತದೆಯೇ? ಪೇಟೆಯಿಂದ ತರಿಸಬೇಕು. ದೂರ, ದುಡ್ಡು. ತಂದರೆ ಉಪಯೋಗಿಸಲು ರಬ್ಬರು ಚೀಲಗಳು ಬೇಕು. ಈ ಪಟಾಟೋಪ ಸರಿಯಲ್ಲ. ಬೋರೇಗೌಡನಿಗೆ ರಕ್ತದ ವೇಗವಾದರೆ ಏನು ಮಾಡಬೇಕು? ಅದನ್ನೇ ತಾವೂ ಮಾಡಬೇಕು. ನುಣ್ಣನೆಯ ಕರೀಮಣ್ಣಿನ ಪಟ್ಟು (ಪೋಲ್ಟೀಸ್) ಕಟ್ಟುವುದು ಸರಿ. ಕೂಡಲೇ ಗಾಂಧೀಜೀ ಅದನ್ನು ಮಾಡುತ್ತಾರೆ.

ಒಮ್ಮೆ ಸೊಳ್ಳೆಗಳ ಕಾಟವನ್ನು ಹೇಗೆ ತಪ್ಪಿಸಬೇಕೆಂಬ ವಿಚಾರ ಬಂತು. ಇವರಿದ್ದ ಸ್ಥಳ ಸ್ವಲ್ಪ ಮಲೇರಿಯಾ ಪ್ರದೇಶ. ರಾತ್ರಿ ಹೊತ್ತು ಸೊಳ್ಳೆಗಳ ಮುತ್ತಿಗೆಯನ್ನು ತಡೆಯುವುದು ಸಾಧ್ಯವಿರಲಿಲ್ಲ. ಸಾಬರ್ಮತಿಯಲ್ಲಿ ನಡೆದ ಘಟನೆ. ಆಶ್ರಮವಾಸಿಗಳು ಯಾರೋ ಹೇಳಿದರು ಇದೇನು ದೊಡ್ಡ ವಿಷಯ, ಸೊಳ್ಳೇ ಪರದೆ ಕಟ್ಟಿಕೊಂಡರಾಯಿತು. ಗಾಂಧೀಜಿಗೆ ಬಹಳ ಅಸಮಾಧಾನವಾಯಿತು. 'ಸೊಳ್ಳೇ ಪರದೆಯನ್ನು ಬಳಸುವ, ಭಾಗ್ಯ ಬೋರೇಗೌಡನಿಗಿದೆಯೆ? ಅವನಿಗಿಲ್ಲದ ಅನುಕೂಲ ನನಗೇಕೆ?' ಅಲ್ಲಿಂದ ಮುಂದೆ ಬಂದಬಂದ ಡಾಕ್ಟರರಿಗೆಲ್ಲ ಒಂದು ವಿಷಮ ಪರೀಕ್ಷೆ. ಸೊಳ್ಳೆಯ ಕಾಟ ತಪ್ಪಿಸಲು ಬೋರೇಗೌಡ ಏನು ಮಾಡಬೇಕು? ಕೊನೆಗೆ ಜೀವರಾಜ ಮೆಹತಾ ಒಮ್ಮೆ ಹೇಳಿದರು. ಕಾಲಿಗೆ, ಮೋರೆಗೆ ಸೀಮೆ (ಚಿಮಣಿ) ಎಣ್ಣೆ ಸವರಿಕೊಂಡು ಮಲಗಬೇಕು. ಅವೆರಡೂ ಹೊದಿಕೆಯಲ್ಲಿರುವುದಿಲ್ಲವಾಗಿ ಅವಕ್ಕೆ ರಕ್ಷಣೆ ಬೇಕು. ಇದಕ್ಕಿಂತ ಬೇರೆ ಉಪಾಯವಿಲ್ಲ. ಅಂದಿನಿಂದ ಗಾಂಧೀಜೀ ಹಾಗೇ ಮಾಡಿದರು.

ಸಹಜವಾಗಿ ಮನುಷ್ಯನ ಅಸಾಮಾನ್ಯ–ಅದ್ಭುತ–ಅಪ್ರಾಕೃತಿಕದ ಒಲವು ಅವನನ್ನು ತಂತ್ರ ಮಂತ್ರಗಳಲ್ಲೋ, ಹಠ ಯೋಗದಲ್ಲೋ, ಶಕ್ತಿ ಪೂಜೆಯಲ್ಲೋ ಮುಳುಗಿಸುತ್ತದೆ. ಗಾಂಧೀಜಿಯಲ್ಲಿ ಆ ಗೆರೆ ಇಲ್ಲದಿಲ್ಲ. ಆದರೆ ಇವರದು ಕರ್ಮಜೀವನ. ಅಲ್ಲದೆ, ತಮಗಾಗಿ ಯಾವ ಸಪ್ತ ಸ್ವರ್ಗಗಳನ್ನೂ ಕಟ್ಟುವ ಯೋಚನೆ ಇಲ್ಲ. ಎಲ್ಲಾ ಬೋರೇಗೌಡನಿಗಾಗಿ. ಹಿಂದುಸ್ಥಾನಕ್ಕೆ ಸ್ವರಾಜ್ಯಬೇಕಾದರೂ ಅದು ಬೋರೇಗೌಡನಿಗಾಗಿ. ಹೀಗಾಗಿ ಅವರ ಆ ಒಲವು ಹೀಗೆ ವಿಚಿತ್ರವಾದ ಸಣ್ಣ ಪುಟ್ಟ ಘಟನೆಗಳಲ್ಲಿ ಪರ್ಯವಸಾನವಾಗುತ್ತದೆ.

ಅಮೇರಿಕದ Boyd ಎಂಬ ಡಾಕ್ಟರ್ ಹೋದ ವರ್ಷ ಸೇವಾಗ್ರಾಮಕ್ಕೆ ಬಂದಿದ್ದರು. ಶುದ್ಧ ಖಾದೀ ವೇಷ. ಅವರು ಎಲ್ಲ ವೈದ್ಯರಂತಲ್ಲ. ಅವರ ವೈದ್ಯದಲ್ಲಿ ಔಷಧವೇ ಇಲ್ಲ. ಮೈಸೂರಿನಲ್ಲಿ ಜಟ್ಟೀ ವೈದ್ಯ ಎಂಬದೊಂದು ರೂಢಿಯುಲ್ಲಿತ್ತು; ಹಾಗೆ. ಬಿರೀ ನರಗಳನ್ನು ನೀವಿ ಸರಿಮಾಡುವುದು. ಬಾಯ್ಡರ ಪದ್ಧತಿಗೆ ಕೈರ್‌ಪ್ರ್ಯಾಕ್ಟ್ರಿಕ್ (Chirpactric) ಎಂದು ಹೆಸರು. ೫೦ ವರ್ಷಗಳ ಕೆಳಗೆ ಅಮೆರಿಕಾದಲ್ಲಿ ಒಬ್ಬ ಡಾಕ್ಟರ್ ಇದನ್ನು

ಕಂಡು ಹಿಡಿದ. ಇದರ ಮೂಲತತ್ವ ಇಷ್ಟು: ಮನುಷ್ಯದೇಹದಲ್ಲಿ ಬೆನ್ನೆಲುಬೇ ಮುಖ್ಯ. ಅದರಲ್ಲೇ ಜೀವರಸ ಹರಿದು ಮನುಷ್ಯನಿಗೆ ಆರೋಗ್ಯ, ದಾರ್ಢ್ಯ, ಶಕ್ತಿಗಳನ್ನು ಕೊಡುತ್ತದೆ. ಆ ಬೆನ್ನೆಲುಬಿನ ಬೇರೆ ಬೇರೆ ಮೂಳೆಗಳಲ್ಲಿ ಎಲ್ಲಾದರೂ ಸ್ವಲ್ಪ ಸೊಟ್ಟೋ ವಿರೂಪವೋ ಬಾಗೋ ಏನಾದರೂ ಆದರೆ ಮೈಯಲ್ಲಿ ಎಲ್ಲಾದರೂ ಒಂದು ಕಡೆ ಅದರ ಪರಿಣಾಮ ಕಂಡು ಬರುತ್ತದೆ. ಮೇಲೆ ಕಾಣುವ ನೋವಿಗೂ ಒಳಗಿನ ಬೆನ್ನೆಲುಬಿಗೂ ಇರುವ ಸಂಬಂಧ ಸುಲಭವಾಗಿ ತಿಳಿಯುವುದಿಲ್ಲ. ಅದಕ್ಕೆ x-ray (ಕ್ಷಕಿರಣ) ಸಹಾಯಬೇಕು. ಅನಂತರ ಆ ಭಾಗವನ್ನು ನೀವಿ, ಮರ್ದಿಸಿ, ಸರಿ ಮಾಡುತ್ತಾರೆ.

ಕಲ್ಕತ್ತೆಯಲ್ಲಿ ಬಾಯ್ಡರ ಚಿಕಿತ್ಸಾಲಯವಿದೆ. ಗಾಂಧೀಜಿಯನ್ನು ಗುಣಪಡಿಸಬೇಕೆಂದು ಬಾಯ್ಡರು ೩-೪ ತಿಂಗಳು ಸೇವಾಗ್ರಾಮದಲ್ಲಿದ್ದರು. ಗಾಂಧೀಜಿಗೆ ಪ್ರಕೃತಿ ಚಿಕಿತ್ಸೆಯೆಂದರೆ ಬಲು ಇಷ್ಟ. ಮದ್ದು ಇಲ್ಲದೆಯೇ ಪ್ರಕೃತಿಯ ನೆರವಿನಿಂದಲೇ ಮೈಯನ್ನು ಗುಣಮಾಡುವುದು ಸಹಜಕ್ರಮವೆಂದು ಅವರ ಅಭಿಪ್ರಾಯ. ಬಾಯ್ಡರ ಜಟ್ಟೀ ವೈದ್ಯ ಗಾಂಧೀಜಿಯ ಪ್ರಕೃತಿ ಚಿಕಿತ್ಸೆಗೆ ಒಂದು ಅಂಗವಿದ್ದಂತೆ.

—:೦:—

# ಧೀರ ಪರಿವ್ರಾಜಕ

ಭನ್ಸಾಲಿ ಗುಜರಾತೀ ಜನ; ಅಹಮುದಾಬಾದಿನಲ್ಲಿ ಕೆಲವುಕಾಲ ಇಂಗ್ಲೀಷು ಅಧ್ಯಾಪಕರಾಗಿದ್ದರು. ಗಾಂಧೀಜೀ ಭಾರತಕ್ಕೆ ಬಂದ ಮೇಲೆ ವಿದ್ಯಾವಂತರಾದ ಗುಜರಾತಿ ತರುಣರಲ್ಲಿ ಆ ಕಡೆಗೆ ಓಡದವರೆ ಕಡಿಮೆ. ಭನ್ಸಾಲಿಭಾಯಿ ತಮ್ಮ ನೌಕರಿಗೆ ತಿಲಾಂಜಲಿ ಕೊಟ್ಟರು. ಅಸಹ ಕಾರ ಚಳುವಳಿಯಲ್ಲಿ ಧುಮುಕಿ ಪರದೇಶೀ ವಸ್ತ್ರ ದಹನಮಾಡುತ್ತಾ ಗುಜ ರಾತಿನಲ್ಲಿ ಓಡಾಡಿದರು. ಸೆರೆಮನೆಯ ಬಹುಮಾನವೂ ಸಿಕ್ಕಿತ್ತು.

ಮುಂದೆ ಭಾಯಿ ಗಾಂಧೀಜಿಯ ಪ್ರಭಾವಕ್ಕೆ ಸಿಕ್ಕರೂ ಆ ಕಾರ್ಯ ಕ್ರಮಕ್ಕೆ ಒಪ್ಪಲಿಲ್ಲ. ಬ್ರಹ್ಮ, ಆತ್ಮ, ಜ್ಞಾನ, ಯೋಗಗಳ ಹುಚ್ಚು ಬಹಳ ಭನ್ಸಾಲಿಗೆ. ಚಿಕ್ಕಂದಿನಿಂದಲೂ ಅಷ್ಟೆ. ಆ ಕಣ್ಣಲ್ಲಿ ಅಲೌಕಿಕವಾದ ಕಳೆ ತುಳುಕುತ್ತದೆ; ದಾರ್ಶನಿಕನ ದೃಷ್ಟಿ ಅದು.

ಭನ್ಸಾಲಿ ಮೊದಲಿಂದಲೂ ವಿಚಿತ್ರ ಜೀವಿ. ಓದಿದ್ದು, ಓದಿಸಿದ್ದು ಇಂಗ್ಲೀಷು ಸಾಹಿತ್ಯವಾದರೂ ವೇದಾಂತದಲ್ಲಿ ಶ್ರದ್ಧೆ. ವಿದ್ಯಾರ್ಥಿಯಾಗಿ ದ್ದಾಗ ಅಂದವಾದ ಉಡುಗೆತೊಡಿಗೆ ತೊಡುವುದರಲ್ಲಿ ಪ್ರಸಿದ್ಧರು. ಕ್ರಮೇಣ ಮೈಮೇಲೆ ಮೊಳದಗಲ ಬಟ್ಟೆಯೂ ಇಲ್ಲದ ಬೆತ್ತಲೆ ಬೈರಾಗಿಯಾದರು. ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿ ಕೀರ್ತಿಯನ್ನು ಬೆಳಗಬೇಕಾದ ಜಾತಕ ಅದು! ಹಠಯೋಗಕ್ಕೆ ಶರಣುಹೋಗಿ ಕಥೆ ಅಡ್ಡತಿರುಗಿ ಹಿಮಾಲಯದ ಹಾದಿ ಹಿಡಿಸಿತು. ದಿನಕ್ಕೆ ನಾಲ್ಕು ಗಂಟೆ ನಿರರ್ಗಳವಾಗಿ ಭಾಷಣ ಮಾಡುವ ಬಾಯಿ ನಾಲ್ಕೆಂಟುವರ್ಷಕಾಲ ಬೀಗ ಹಾಕಿಕೊಂಡು ಮಾತೇ ಮರೆತುಹೋಯಿತು.

ಭನ್ಸಾಲಿಭಾಯಿ ಸೇವಾಗ್ರಾಮದ ಆಶ್ರಮದ ಅತಿಥಿಭವನದಲ್ಲಿ ಒಂದು ಮೂಲೆಯಲ್ಲಿ ದೂರವಾಗಿ ಕೂತು ರಾಟೆ ತಿರುಗಿಸುತಿದ್ದರು. ಮಗ್ಗುಲಲ್ಲಿ ಬೇವಿನಸೊಪ್ಪಿನ ರಾಶಿ, ಆಗಾಗ ಆ ಸೊಪ್ಪನ್ನು ತರಿದು ಮೆಲ್ಲುತ್ತಿದ್ದರು. ಮಾತು ಮಾತ್ರ ಇಲ್ಲವೇ ಇಲ್ಲ! ನಿರಂತರ ಮೌನ!

ಕೆಲವುದಿನ ಬಿಟ್ಟು ಹಿಂತಿರುಗಿ ಬಂದಾಗ ನೋಡಿದರೆ ಭನ್ಸಾಲಿ ಮೌನ ವನ್ನು ಬಿಟ್ಟುಕೊಟ್ಟು ಮಕ್ಕಳಿಗೆ ಎ, ಬಿ, ಸಿ, ಡಿ, ಕಲಿಸುತ್ತಿದ್ದರು. ಮಾತಾಡಿಸಿದೆ. ಅಬ್ಬ. ಆ ರೋಮಾಂಚವನ್ನು ಏನು ಹೇಳಲಿ! ಮೌನಕ್ಕೆ ಮಾತುಬಂದಷ್ಟು ಅಚ್ಚರಿ. ಭನ್ಸಾಲಿ ಪ್ರೀತಿಯಿಂದ ಮಾತನಾಡಿಸಿದರು. ಗಾಂಧೀಜಿಯ ಮೇಲೆ ತಮಗಿದ್ದ ಅಪಾರ ಶ್ರದ್ಧೆಯನ್ನು ಕುರಿತು ಹೇಳಿದರು. ಈ ವೈರಾಗಿಗೆ ಆ ಕರ್ಮಮಗ್ನ ರಾಜಕೀಯ ಪ್ರಮುಖನೆ ಗುರು! ಲೋಕದ ರೀತಿಯೆ ವಿಲಕ್ಷಣ, ಅತಿ ಗೂಢ!

ಭನ್ಸಾಲಿ ಗಾಂಧೀಜಿಯ ಶಿಷ್ಯನಾಗಬಾರದೆಂದು ಅವರ ಮಾವ ಶ್ಯಾಮಜೀ ಕೃಷ್ಣವರ್ಮ ಇನ್ನಿಲ್ಲದಷ್ಟು ಹೇಳಿದರು. ಕೃಷ್ಣವರ್ಮ ಭಾರತೀಯ ಕ್ರಾಂತಿಕಾರರ ಗುರು. ಎಷ್ಟೋ ಕಾಲ ಭಾರತೀಯ ಕ್ರಾಂತಿ ಚಳುವಳಿಗೆ ಆಸರೆಯಾಗಿದ್ದರು. ಅವರ ಮಾತು ಭನ್ಸಾಲಿಗೆ ರುಚಿಸಲಿಲ್ಲ. ಗಾಂಧೀಜಿಯ ಬಳಿಸಾರಿ ಸಾಬರ್ಮತಿ ಸತ್ಯಾಗ್ರಹಾಶ್ರಮವನ್ನು ಸೇರಿದರು. ಆದರೆ ಭಾಯಿಯ ವೈರಾಗ್ಯದಾಹಕ್ಕೆ, ಹಠಯೋಗ ಸಾಧನೆಗೆ ಆಶ್ರಮವಾಸ ಸರಿಹೋಗಲಿಲ್ಲ. ಗಾಂಧೀಜಿಯ ಕರ್ಮಾಸಕ್ತಿ ಅವರಿಗೆ ರುಚಿಸಲಿಲ್ಲ. ಆಶ್ರಮವನ್ನು ಬಿಟ್ಟು ಪರಿವ್ರಾಜಕರಾಗಿ ಎತ್ತಲೋ ಹೊರಟು ಹೋದರು. ದೇಶವನ್ನೆಲ್ಲ ಸುತ್ತಿದರು. ಸ್ಮಶಾನವಾಸಿಯಾದರು, ಹಿಮಾಲಯ ಯಾತ್ರೆ ಮಾಡಿದರು ಕೆಲವುದಿನ ಬೇವಿನಸೊಪ್ಪು ತಿಂದರು; ಕೆಲವು ಕಾಲ ಭಿಕ್ಷೆ ಸ್ವೀಕರಿಸಿದರು; ಕೆಲವು ಕಾಲ ಉಪವಾಸವೆ ಇದ್ದರು. ಕೆಲವು ದಿನ ಗಾಣದ ಹಿಂಡಿ ತಿಂದರು.

ಆ ಉಗ್ರಯೋಗಿಯ ಹಠಯೋಗಕ್ಕೆ ಒಂದು ಮುಖವಲ್ಲ. ಪ್ರಾಣಾಯಾಮ ಸಾಲದೆ ಸೊಂಟದವರೆಗೆ ನೀರಿನಲ್ಲಿ ಇಡೀ ರಾತ್ರಿಯೆಲ್ಲ ನಿಂತು ಅಖಂಡವಾಗಿ ಧ್ಯಾನಮಾಡಿದರು. ಒಂದು ಸಲ ಅವರಿಗೆ ನಿರಂತರ ಮೌನ ವ್ರತ ಹಿಡಿಯುವ ಬಯಕೆಯಾಯಿತು. ಮಾತಾಡದೆ ಇದ್ದರೆ ಸಾಲದು! ಬಾಯನ್ನೇ ಹೊಲಿದುಕೊಂಡು ಬಿಡಬೇಕು ಎನ್ನಿಸಿತು. ಧೀರ ಜೀವ! ತಮ್ಮ ಗೆಳೆಯರನ್ನು ಕೇಳಿದರು ಬಾಯಿಗೆ ಬೀಗಹಾಕಲು. ಹೇಗೋ ಅಂತೂ ಆ ವ್ಯವಸ್ಥೆಯೂ ಆಯಿತು. ಬಾಯಿಗೆ ಬೀಗ ಬಿದ್ದಮೇಲೆ ಮಾತು ಹಾಗಿರಲಿ, ಆಹಾರದ ಚಿಂತೆಯೂ ತಪ್ಪಿತು. ಭನ್ಸಾಲಿಯದು ಬಹು ಸೂಕ್ಷ್ಮ

ಸ್ವಭಾವ. ಒಂದು ಹಿಡಿ ಹಿಟ್ಟು ತಾ ತಿಂದರೆ ಬಡಜನರ ಪಾಲಿಗೆ ಅಷ್ಟು ಕಡಮೆಯಾಯಿತಲ್ಲ ಎಂಬ ಅಳುಕು. ಅದಕ್ಕಾಗಿಯೇ ಬೇವಿನಸೊಪ್ಪು ತಿನ್ನಲು ಮೊದಲು ಮಾಡಿದ್ದು.

ಬಾಯಿಗೆ ಬೀಗ ಹಾಕಿ ಹೀಗೆ ನಿರಂತರ ನಿಶ್ಶಬ್ದ ನಿರಾಹಾರ ಎರಡನ್ನೂ ಸಾಧಿಸಿದರು. ಬಾಯನ್ನೂ ಎರಡೂ ಕಡೆ ಹೊಲಿದು ನಡುವೆ ಚಿಕ್ಕದಾಗಿ ರಂಧ್ರವನ್ನು ಬಿಟ್ಟಿತ್ತು. ಆ ರಂಧ್ರದಿಂದ ಯಾವಾಗಲಾದರೂ ಒಂದು ಉದ್ಧರಣೆ ಹಾಲೋ ನೀರೋ ಹಾಕಿಕೊಂಡರೆ ಉಂಟು, ಇಲ್ಲದಿದ್ದರೆ ಇಲ್ಲವೇ ಇಲ್ಲ. ಆ ಸಂದಿನಿಂದ ಯಾವಾಗಲಾದರೂ ಹೊರಟರೆ ಕಿಲಕಿಲ ಧ್ವನಿಯೊಂದು ಹೊರಡುತ್ತಿತ್ತು. ಹಿಡಿಸಲಾರದ ನಗು. ಅದರ ಕಾರಣ, ಅರ್ಥ ಅವರೊಬ್ಬರಿಗೇ ಗೊತ್ತು.

ಈ ಮುಸಣೇಶ್ವರನಿಗೆ ಬಟ್ಟೆ ಎಲ್ಲಿ ಬರಬೇಕು. ಅಥವಾ ಬಟ್ಟೆಯ ಚಿಂತೆಯಾದರೂ ಏಕೆ? ಬೆತ್ತಲೆಯೇ ಇದ್ದುಬಿಟ್ಟರು. ಕೆಲವು ದಿನದ ಮೇಲೆ ಬೇವಿನಸೊಪ್ಪೇ ಉಡಿಗೆಯಾಯಿತು. ಸಾಬರ್ಮತಿ ಆಶ್ರಮಬಿಟ್ಟು ಅಲೆದಲೆದು ಮತ್ತೆ ಗಾಂಧೀಜಿಯನ್ನು ಹುಡುಕಿಕೊಂಡು ಸೇವಾಗ್ರಾಮಕ್ಕೆ ಬಂದಾಗ ಬೇವಿನೆಲೆಯ ಪಂಚೆಯನ್ನೇ ಉಟ್ಟಿದ್ದರಂತೆ. ಬೈರಾಗಿತನದ ಪಿತ್ತಲೋಕದಿಂದ ಅವರನ್ನು ಇಳಿಸಿ ಈ ಲೋಕಕ್ಕೆ ತರಲು ಗಾಂಧೀಜೀ ಬಹಳ ಕಷ್ಟಪಡಬೇಕಾಯಿತು. ಒಂದುಸಲ ಭನ್ಸಾಲಿಗೆ ಜ್ವರ ಬಂತು. ವರ್ಧಾಕ್ಕೆ ಆಸ್ಪತ್ರೆಗೆ ಕಳಿಸಿದರು. ಆಸ್ಪತ್ರೆಗೆ ಹೋದಮೇಲೆ ಈ ಬೈರಾಗಿಗೂ ಅಲ್ಲಿ ವಸ್ತ್ರಧಾರಣೆಯಾಯಿತು. ಆಶ್ರಮಕ್ಕೆ ಹಿಂದಿರುಗಿದಮೇಲೆ ಆ ದೀಕ್ಷೆಯನ್ನೇ ಮುಂದುವರಿಯುವಂತೆ ಮಾಡಿದರು ಗಾಂಧೀಜೀ.

ಮಾತಿನ ವಿಷಯದಲ್ಲೂ ಇಷ್ಟೆ. ಭನ್ಸಾಲಿಭಾಯಿಯ ಮೌನವ್ರತವನ್ನು ಬಿಡಿಸಬೇಕಾದರೆ ಗಾಂಧೀಜಿಯ ತಪಸ್ಸನ್ನೆಲ್ಲ ಧಾರೆಯೆರೆಯಬೇಕಾಯಿತು. ಸೇವಾಗ್ರಾಮಕ್ಕೆ ಬಂದಾಗ ಭಾಯಿಗೆ ಮಾತಿಲ್ಲ ಕತೆಯಿಲ್ಲ. ಒಂದು ಮೂಲೆ ಹಿಡಿದು ಕೂತರು. ಗಾಂಧೀಜಿಯ ಸನ್ನಿಧಿಯಲ್ಲಿದ್ದೇನಲ್ಲ, ಅಷ್ಟೇ ಸಾಕು ಎಂದು ಅವರ ಮನಸ್ಸಿನ ಭಾವನೆ. ಆದರೆ ಗಾಂಧೀಜೀ ಹಟಮಾರಿ ಗಿರಾಕಿ. ಸುಮ್ಮನೆ ಬಿಟ್ಟಾರೆ? ಹಾಗೂ ಹೀಗೂ ಮಾಡಿ 'ನಿಮ್ಮೊಬ್ಬರ ಸಂಗಡ ಮಾತಾಡುತ್ತೇನೆ, ಅಷ್ಟೆ' ಎನಿಸಿಕೊಂಡರು ಭಾಯಿ

ಯಿಂದ. ಗಾಂಧೀಜೀ ಸರ್ವಾತೀತರು; ಅವರು ಅಪವಾದ! ಅಂತೂ ಇಂತೂ ಭಾಯಿಯನ್ನು ಸಾಧಿಸಿ ಕೊನೆಗೆ ಎಲ್ಲರೊಡನೆಯೂ ಮಾತಾಡು ವಂತೆ ಮಾಡಿದರು ಗಾಂಧೀಜೀ.

ಅಲ್ಲಿಗೆ ಮುಗಿಯಲಿಲ್ಲ ಈ ಗಾಣ. ಮೆಲ್ಲ ಮೆಲ್ಲನೆ ಆಗಿಷ್ಟು ಈಗಿಷ್ಟು ಮಾತಾಡಿ ಹಿತ ಹೇಳಿ ಸ್ವಲ್ಪ ಸ್ವಲ್ಪವಾಗಿ ಲೋಕ ಸಂಗ್ರಹದ ಆಸಕ್ತಿಯನ್ನು ಹುಟ್ಟಿಸಿದರು ಬಾಪು. ಭನ್ಸಾಲಿಭಾಯಿ ಹಠಯೋಗಿ, ಬಡಪೆಟ್ಟಿಗೆ ಒಪ್ಪ ಲಿಲ್ಲ. ರಾಟೆ ತಿರುಗಿಸುವುದೂ ಕೂಡ ಒಂದು ಕರ್ಮ; ಜ್ಞಾನಕ್ಕೆ ಕರ್ಮ ಲವಲೇಶವೂ ಸಲ್ಲದು—ಎಂಬ ವಾದ ಅವರದು. ಕಡೆಗೆ ಭಾಯಿಯ ಭಕ್ತಿ-ಪ್ರೇಮ ಒಣಜ್ಞಾನದ ಹಟವನ್ನು ಗೆದ್ದವು. 'ನಾನೇ ನೂತು ನೇಯಿಸಿ ಕೊಟ್ಟ ಬಟ್ಟೆಯಿಂದ ನಿಮಗೆ ಸಂತೋಷವಾಗುವಂತಿದ್ದರೆ ಅದಕ್ಕಾಗಿ ಮಾತ್ರ ನೂಲುತ್ತೇನೆ' ಎಂದರು. ಹೆಜ್ಜೆ ಹೆಜ್ಜೆಗೂ ಗಾಂಧೀಜೀ ಚರ್ಚೆ-ತರ್ಕಮಾಡಿ ಭಾಯಿಯನ್ನು ಕರ್ಮಮಾರ್ಗಕ್ಕೆ ಎಳೆದರು. ಭಾಯಿ ತಮ್ಮ ಎಲ್ಲ ಜ್ಞಾನ ಪಂಥದ ನಡುವೆಯೂ ಹುದುಗಿದ್ದ ಅಪಾರ ಗುರುಭಕ್ತಿಯಿಂದ ಈ ದಾರಿಗೆ ಬಂದರು.

* * * *

"ಒಬ್ಬ ಹೆಂಗಸಿನ ಗೌರವ ಎಂದರೆ ಆ ದೇಶದ ಗೌರವ, ಆ ಜನಾಂ ಗದ ಗೌರವ. ಎಷ್ಟೇ ಕಷ್ಟ ಬರಲಿ, ಎಷ್ಟೇ ದುಃಖ ಬರಲಿ ಆ ಗೌರವವನ್ನು ಸಲ್ಲಿಸಬೇಕು, ಕಾಪಾಡಿಕೊಳ್ಳಬೇಕು" ಎಂದು ಭನ್ಸಾಲಿಭಾಯಿ ವ್ರತ ತೊಟ್ಟು ತಮ್ಮ ಹೆಸರನ್ನು ಭಾರತ ಸಂಸ್ಕೃತಿ ವೀರರ ಪಟ್ಟಿಯಲ್ಲಿ ಸೇರಿಸಿದಾರೆ.

ಭಾಯಿ ಗೊಡ್ಡು ಬ್ರಹ್ಮಚಾರಿ; ವಿಚಿತ್ರ ವೈರಾಗಿ. ಜಗತ್ತು ಇದ್ದ ರೇನು, ಮುಳುಗಿದರೇನು ತನ್ನ ಜ್ಞಾನಾನಂದವೇ ತನಗೆ ಸಾಕು ಎಂಬ ಅವ ಧೂತ ಪಂಥಿ. ತನ್ನ ಹಸಿವು ಹಿಂಗಿಸಲು ಕೂಡ ಬಾಯಿಬಿಡದ, ಭಿಕ್ಷೆ ಕೇಳದ ಉಗ್ರ ಮೌನವ್ರತಿ. ಇಂಥ ಜೀವ ಅನಾಥ ಅಬಲೆಯರ ಮಾನ ಭಂಗಕ್ಕೆ ಮರುಗಿ ಪ್ರಾಯೋಪವೇಶ ಮಾಡಿದರು. ಪರರ ದುಃಖ ನಿವಾ ರಿಸಲು ನಾನು ಶಕ್ತನಲ್ಲ ಎಂದು ಜಗತ್ತನ್ನು ಬಿಟ್ಟು ಹರಿದೋಡಿದ್ದ ಜೀವ ಬಾಳಿನಲ್ಲಿ ಎಲ್ಲಕ್ಕಿಂತ ದೊಡ್ಡದು ದುಃಖತಪ್ತರ ಆರ್ತಿನಾಶನ, ಆರ್ತತ್ರಾಣ ಪರಾಯಣತೆ ಎಂದು ತೋರಿಸಿದರು. 'ಮಹಿಳೆಯರ ಮಾನದ ಮಾತು

ಬಂದಾಗ ಈ ಜೀವ ದೊಡ್ಡ ಕಡಲಿನ ಹನಿ ಮಾತ್ರ! ಒಂದು ಹನಿ ಮಾತ್ರ' ಎಂದು ಆಡಿ ಈ ದೊಡ್ಡ ಬೈರಾಗಿ ಭಾರತೀಯ ಗೃಹಸ್ಥರಿಗೊಂದು ಪಾಠ ಕಲಿಸಿದ್ದಾರೆ, ಮೇಲ್ಪಂಗ್ತಿ ಹಾಕಿ ಕೊಟ್ಟಿದ್ದಾರೆ.

ಭಾಯಿಯನ್ನು ಬಲ್ಲವರಿಗೆ ಈ ವಿಚಿತ್ರ ಪರಿವರ್ತನದ ಒಳ ಗುಟ್ಟು ಗೊತ್ತು. ಸನ್ಯಾಸವನ್ನು ನಂಬಿ ಬಹೂದಕರಾಗಿ, ಸ್ಮಶಾನವಾಸಿಯಾದ ಭನ್ಸಾಲಿ ಕರ್ಮತತ್ಪರರಾಗಿ ದೇಶಕ್ಕಾಗಿ ದೇಶವಾಸಿನಿಯರ ಮಾನಕ್ಕಾಗಿ ಜೀವಕೊಡಲು ಸಿದ್ಧರಾದರು. ಈ ಪವಾಡವನ್ನು ಮೆರೆಸಿದ ಕೀರ್ತಿ ಭನ್ಸಾಲಿಯ ಗುರುವಿನದು, ಗಾಂಧೀಜಿಯದು.

ಭಾಯಿ ಉಪವಾಸಮಾಡುತ್ತ ವ್ರತಶಯ್ಯೆಯಲ್ಲಿ ಮಲಗಿದ್ದಾಗ ಯಾರೋ ಕೇಳಿದರು ; 'ಭಾಯಿ, ದೇಶಕ್ಕಾಗಿ ಮಡಿಯುವುದಕ್ಕಿಂತ ಬದುಕುವುದು ಮೇಲಲ್ಲವೆ ?'

ಭನ್ಸಾಲಿ ಹೇಳಿದರು : 'ತಮ್ಮ! ಈ ಬದುಕು ಈಗಾಗಲೇ ಅತಿ ದೀರ್ಘವಾಗಿದೆ. ಈ ಗಳಿಗೆ, ಮರುಗಳಿಗೆ ಸಾವು ಬಾರದೆಂಬ ಭರವಸೆ ಯಾರಿಗಿದೆ ? ಅಲ್ಲದೆ ನಿನ್ನೆ ಕಾಂಗ್ರೆಸ್ ಭಕ್ತರಾಗಿದ್ದವರು ಇಂದು ಸರಕಾರದ ದಾಸರಾಗಿದಾರೆ. ಅಂತೇ ನಮ್ಮ ನಮ್ಮ ಕರ್ತವ್ಯವನ್ನು ನಾಳೆಗೆ ತಳ್ಳಬಾರದು. ಇಂದಿನ ಕೆಲಸ ಇಂದೇ ಮುಗಿಯಬೇಕು ! ಆಲಸ್ಯಂ ಅಮೃತಂ ವಿಷಂ, ನಾಳೆ ಉತ್ತಮವನ್ನು ಮಾಡುವೆನೆಂದು ಇಂದಿನ ಧರ್ಮ ನಿರ್ವಹಿಸದವರುಂಟೆ ?'

ಭಾರತದ ಕಠೋರ ದಾರಿದ್ರ್ಯವೂ ಒಂದು ಕಾಲಕ್ಕೆ ಭನ್ಸಾಲಿಗೆ ಹೀಗೆ ಮೈನಿಮಿರೆಬ್ಬಿಸಿರಲಿಲ್ಲ ! ಅದೊಂದು ನಿಃಸ್ವಪ್ನನಿದ್ರೆ, ಭಂಗವಿಲ್ಲದ ಶಾಂತಿ, ಆದರೆ ಈಗ—

ಹರೆಯದಿಂದಲೂ ದೇಹವನ್ನು ದಂಡಿಸಿ, ಕರಣವನ್ನು ಖಂಡಿಸಿದ ಭನ್ಸಾಲಿಭಾಯಿ ತನ್ನ ಗುರುವಿನ ಹಾದಿ ಅಹಿಂಸೆಯ ಪ್ರಯೋಗವೊಂದನ್ನು ಇಷ್ಟು ಪರಿಣಾಮಕಾರಿಯಾಗಿ, ಸಫಲವಾಗಿ ಮಾಡಿದ್ದರಲ್ಲಿ ಅಚ್ಚರಿಯೇನಿಲ್ಲ. ಅದರಲ್ಲೂ ಗಾಂಧೀಜೀ ಇಂದು ಹೊರಗಿಲ್ಲ. ಅಂತೆಯೇ ತನ್ನ ಕರ್ತವ್ಯ ಮೊದಲಿಗಿಂತ ಹೆಚ್ಚು. ದೇಶಹಿತಕ್ಕಾಗಿ, ಸತ್ಯಸಾಧನೆಗಾಗಿ ಅನ್ಯೋಪಾಯವಿಲ್ಲದಾಗ ಗಾಂಧೀಜೀ ಉಪವಾಸ ಮಾಡಲಿಲ್ಲವೆ ? ತನಗೆ ಮಾತ್ರ ಬೇರೆ

ದಾರಿ ಏನಿತ್ತು? ಎಲ್ಲಾ ದಾರಿಯೂ ಕಟ್ಟಾದಮೇಲೆ ತಾನೇ ತಾನೀ ಪ್ರಾಯೋಪವೇಶ ಮಾಡಿದ್ದು.

ಎಷ್ಟೋ ಜನ ಮುಖಂಡರು ಬಂದು ಬೇಡಿಕೊಂಡರು. ಪಾರಣೆ ಮಾಡಿ, ಈ ಹಟ ಬಿಡಿ ಎಂದು. ಭಾಯಿ ಒಪ್ಪಲಿಲ್ಲ. 'ನನಗೇನೂ ತೊಂದರೆಯಿಲ್ಲ, ಸುಖವಾಗಿದ್ದೇನೆ. ತೀರ ಬರಬಾರದ್ದು ಬಂದರೆ ಏನಾ ದೀತು? ಸಾವು ತಾನೇ? ಅದು ಬರಬಾರದ್ದೇನಲ್ಲ, ಬಯಸಬೇಕಾದ್ದು' ಭಾಯಿಯ ಸತ್ಯನಿಷ್ಠೆ, ಗುರುಭಕ್ತಿ ಅಂಥದು. ತಮ್ಮ ಪವಿತ್ರ ಉದ್ದೇಶದಲ್ಲಿ ಅವರಿಗಿದ್ದ ನಂಬಿಗೆ ಅಷ್ಟು ಬಲ.

ಉಪವಾಸದಿಂದ ಭನ್ಸಾಲಿ ಬರೀ ಅಸ್ಥಿಪಂಜರವಾಗಿದ್ದರೂ ಅವರ ಆತ್ಮ ಆನಂದಮಯವಾಗಿತ್ತು. ಯಾವಾಗಲೂ ಹಸನ್ಮುಖಿಗಳಾಗಿಯೇ ಇದ್ದರು. ಒಮ್ಮೆ ಪ್ರಕೃತಿ ಕೊಂಚ ಚಿಂತಾಜನಕವಾದಾಗ ವೈದ್ಯರು ಸೂಜಿಮದ್ದು ಕೊಡುತ್ತೇವೆ ಎಂದರಂತೆ. ಗಾಢ ನಿದ್ರೆಯಲ್ಲಿದ್ದ ಭಾಯಿ ಧಿಗ್ಗನೆದ್ದು ಬೇಡವೆಂದು ನಿರಾಕರಿಸಿದರು. ಈ ದೇಹ ಕರಗಿಹೋದೀತಲ್ಲ ಎಂಬ ಯೋಚನೆಯೆ ಅವರಿಗಿರಲಿಲ್ಲ.

ಸತ್ಯಾಗ್ರಹದ ಬತ್ತಳಿಕೆಯಲ್ಲಿ ಉಪವಾಸ ಮಹಾಸ್ತ್ರ: ಸಂದರ್ಭೋ ಚಿತವಾದರೆ ಅದರಷ್ಟು ಪರಿಣಾಮಕಾರಿಯಾದ ಆಯುಧ ಮತ್ತೊಂದಿಲ್ಲ ಎಂದು ಗಾಂಧೀಜೀ ಹೇಳಿದುದನ್ನೂ ಮತ್ತೊಮ್ಮೆ ಭಾಯಿ ಪ್ರಮಾಣಿಸಿ ಕೊಟ್ಟಿದ್ದಾರೆ. ಕಲ್ಲನ್ನೂ ಕರಗಿಸುವ ತಪಸ್ಸು ಅದು; ಇದಿರಾಳಿಯ ಹೃದಯ ಪರಿವರ್ತನೆ, ಉತ್ತಮಗುಣ ಪ್ರಚೋದನೆಯ ಮಹಾ ಸಾಹಸ ಅದು. ಭನ್ಸಾಲಿ ಆ ಘೋರ ತಪಸ್ಸು ಮಾಡಿದರು. ಅವರ ಆ ದಿವ್ಯ ತ್ಯಾಗದ ಗುರುತಾಗಿ ಆಚಂದ್ರಾರ್ಕಪರ್ಯಂತ ನಿಂತೀತು 'ಭನ್ಸಾಲಿ ಕುಟೀರ'. ಅದಕ್ಕಿಂತ ಹೆಚ್ಚಾಗಿ ಭನ್ಸಾಲಿಯ ಹೆಸರು ಭಾರತದ ಸಂತಾನಕ್ಕೊಂದು ದಿವ್ಯ ಸಂದೇಶವಾಗಿ ಚಿರಂತನ ಜ್ಯೋತಿಯಾಗಿ ಬೆಳಗೀತು.

ಗಾಂಧೀಜಿಗೆ ಭನ್ಸಾಲಿಯ ಬಗ್ಗೆ ಎಷ್ಟೋ ಆಸೆ, ಎಷ್ಟೋ ಕನಸು. ಸನ್ಯಾಸದ ಆ ಕರ್ಮಮಾರ್ಗ ಬಿಟ್ಟು ತಮ್ಮ ದಾರಿಗೆ ಬರಲಿ ಎಂದು ಬಯಕೆ. "ನೀನು ಮರಳಿ ನನ್ನ ಜೊತೆಗೆ ಬಂದು ನಿಂತು ನಿನ್ನ ಬಗ್ಗೆ ನಾ ಕಟ್ಟಿಕೊಂಡ ಆಸೆ ತೀರಿಸುತ್ತೀತಾನೆ!" ಪ್ರಿತಿಯಿಂದ ಕೇಳಿದ್ದರು.

---

# ಸನ್ಯಾಸ-ಕರ್ಮ

ಭನ್ಸಾಲಿಭಾಯಿ ೧೯೩೭ರ ಕೊನೆಯಲ್ಲಿ ಮತ್ತೆ ಗಾಂಧೀಜಿಯ ಬಳಿಗೆ, ಸೇವಾಗ್ರಾಮಕ್ಕೆ ಬಂದರು. ಬೈರಾಗಿಯಂತೆ ಎಲ್ಲಿ ತಿರುಗುತ್ತಿದ್ದರೊ ಏನೋ ಒಂದು ದಿನ ಮುಗಿಲು ಕಳಚಿ ಬಿದ್ದಂತೆ ಪರ್ಣಕುಟಿಯಲ್ಲಿ ಬಂದು ನಿಂತರು.

ಬಂದು ನಿಂತಾಗ ಅವರ ವೇಷ ನೋಡಲು ಸಾಧ್ಯವಿರಲಿಲ್ಲ. ಆ ಜಡೆಗಟ್ಟಿದ ಕೂದಲು, ಆರೈಕೆಯಿಲ್ಲದೆ, ಮಳೆಯಿಲ್ಲದೆ ಬಿರುಕು ಬಿಟ್ಟ ಎರೆಯ ನೆಲದಂತೆ, ಸುಕ್ಕಾಗಿ ಮುಕ್ಕಾಗಿ ಹೋದ ಮೈ. ಬಾಯಿಗೆ ಬೀಗ ವಿಲ್ಲದಿದ್ದರೂ ಮಾತು ಇಲ್ಲ. ನಿರಂತರ ಮೌನ.

ಮಾತಿಲ್ಲ ಕತೆಯಿಲ್ಲ, ಪ್ರಶ್ನೆಯಿಲ್ಲ. ಪ್ರಶಾಂತವಾಗಿ, ಒಬ್ಬರಿಗೆ ತೊಂದರೆ ಕೊಡದೆ ತಾ ತೊಂದರೆ ಪಡದೆ, ಕೊಟ್ಟರೆ ಬೇವಿನ ಸೊಪ್ಪು ತಿಂದು, ಕೊಡದಿದ್ದರೆ ಉಪವಾಸವಿದ್ದು ಆಶ್ರಮದ ಮೂಲೆಯೊಂದರಲ್ಲಿ ಕೂತರು. ಆದರೆ ಗಾಂಧೀಜೀ ಬಿಡಬೇಕಲ್ಲ! ಭಾಯಿಯನ್ನು ಮಾತಾಡಿಸಿ ನಾನಾ ಪ್ರಶ್ನೆ ಕೇಳಿದರು.

'ಈ ಆಹಾರ ಒಗುತ್ತದೆಯೆ ನಿನಗೆ?'

'ಚೆನ್ನಾಗಿ'

'ಬೇವಿನೆಲೆ ಬಹಳ ಕಹಿಯಲ್ಲವೆ?'

ಆತ ನಕ್ಕ. 'ಬೇವಿನಲ್ಲೂ ನಾನಾವಿಧ. ಕೆಲವು ಬಹು ಕಹಿ; ಕೆಲವು ಕಹಿಯಿಲ್ಲ. ರೂಢಿಯಾದರೆ ನಾಲಗೆಗೆ ಅದೇ ರುಚಿಯಾಗುತ್ತದೆ. ಇದು ಜಿಹ್ವಾನಿಗ್ರಹದ ಮಾತು.'

'ನೀ ಮಲಗುವುದೆಲ್ಲಿ? ಹೊದೆಯಲೂ ಹಾಸಲೂ ಏನೂ ಇಲ್ಲವಲ್ಲ?

'ಎಲ್ಲಿದ್ದರಲ್ಲಿ. ಏನಿದ್ದರೆ ಅದು.'

'ಚಾಪೆ ಹಚ್ಚಡ ಕೊಟ್ಟರೆ ಬಾಧಕವಿಲ್ಲವಲ್ಲ?'

'ಇಲ್ಲ. ಆದರೆ ಎಷ್ಟೋಸಲ ಮರದ ಕೆಳಗೆ, ಎಷ್ಟೋಸಲ ಮಣ್ಣಿನಲ್ಲಿ, ಬಯಲಲ್ಲಿ, ಸ್ಮಶಾನದಲ್ಲಿ ಮಲಗಿದೇನೆ.'

'ಯಾವಾಗಲಾದರೂ ಹಾವು ಚೇಳು, ದುಷ್ಟಮೃಗಗಳಿಂದ ಬಾಧೆಯಾಗಿದೆಯೇ ?'

'ಕಾಣೆ. ಒಂದುಸಲ ಚೇಳು ಕಡಿದಿತ್ತು ; ಆದರದು ಇರುವೆ ಕಡಿದಂದಿತ್ತು. ಎಷ್ಟೋ ಹಾವನ್ನು ನೋಡಿದೇನೆ; ಒಂದುಸಲ ಚಿರತೆ ಬಂದಿತ್ತು. ಯಾವುದೂ ನನಗೆ ತೊಂದರೆ ಮಾಡಲಿಲ್ಲ. ನನಗೆ ಭಯವೂ ಇರಲಿಲ್ಲ !'

'ಸ್ಮಶಾನದಲ್ಲಿ ಏನಾದರೂ ವಿಚಿತ್ರ ಅನುಭವವಾಯಿತೋ ?'

'ಅಶರೀರಿ ಜೀವಗಳು ಇದ್ದಂತೆ ತೋರುತ್ತದೆ, ಅದನ್ನು ನಂಬಬೇಕಾಗಿಲ್ಲ. ನಾನೇನೋ ಅವನ್ನು ನೋಡಿದೆ. ಅದರಿಂದ ಆಗಾಗ ಭಯವಾದಂತೆ ಆಗುತ್ತದೆ. ಮರುಗಳಿಗೆಯೆ ಧೈರ್ಯ ತಂದುಕೊಳ್ಳುತ್ತೇನೆ.'

'ಭಿಕ್ಷೆಗಾಗಿ ಮಾತಾಡಬೇಕಾಗುತ್ತದಯೊ ?'

'ಇಲ್ಲ.'

'ಯಾವಾಗಲೂ ಸಿಗುತ್ತದೆಯೆ ?'

'ಇಲ್ಲ. ಎಷ್ಟೋಸಲ ಸಿಗದು. ಒಂದುಸಲ ಮೂರು ದಿನ ಉಪವಾಸವಿದ್ದೆ. ಕೆಲವರು ಸಂತೋಷದಿಂದ ನೀಡಿದಾರೆ. ಕೆಲವರಿಗೆ ನಾನು ಯಾರೋ ಎಂದು ಅನುಮಾನ. ಕೆಲವರು ಮೋಸಗಾರ ಎಂದರು, ಕೆಲವರು ಗುಪ್ತ ಪೋಲೀಸ್ ಎಂದರು ?'

'ನಿನ್ನ ಹಳೆಯ ಸ್ನೇಹಿತರು, ಹಿಂದೆ ನಿನಗೆ ಚಿಂತಾಕಾರಣರಾಗಿದ್ದ ಬಳಗ—ಯಾರ ಯೋಚನೆಯಾದರೂ ಬರುತ್ತದೆಯೆ ?'

'ಎಂದೂ ಇಲ್ಲ. ಎಲ್ಲ ನೆನಪೂ ಹೋಗಿದೆ ?'

'ಹಳ್ಳಿಯ ಜನರ ಕಠೋರ ದಾರಿದ್ರ್ಯ ನಿನ್ನನ್ನು ನೋಯಿಸದೆ ?'

'ಹೂಂ, ಹೌದು, ಕೊಂಚಮಟ್ಟಿಗೆ. ನೀವು ಅದರ ಬಗ್ಗೆ ಬರೆದದ್ದೆಲ್ಲ ನೆನಪಾಗುತ್ತದೆ. ನೀವು ಬರೆದ ಹೃದಯದ್ರಾವಕವಾದ 'ಮೃತ್ಯು ತಾಂಡವ' ನೆನೆಯುತ್ತೇನೆ. ಅವರ ಪಾಲಿನ ಹಿಡಿ ಹಿಟ್ಟನ್ನು ಕದಿಯುತ್ತೇನಲ್ಲ ಅನಸುತ್ತಿತ್ತು. ಈಗ ಸರಿಯಾಯ್ತು.'

'ಹಾಗಾದರೆ ನೀನು ಮರಳಿ ನನ್ನ ಜೊತೆಗೆ ಬಂದು ನಿಂತು ನಿನ್ನ ಬಗ್ಗೆ ನಾ ಕಟ್ಟಿಕೊಂಡ ಆಸೆ ತೀರಿಸುತ್ತೀ ತಾನೆ?'

'ಆಗಲಿ ಎನ್ನುವ ಹಾಗಿದ್ದರೆ ಚೆನ್ನಾಗಿತ್ತು. ನಾನೇನು ಬಲ್ಲೆ. ದೇವರಿಗೇ ಗೊತ್ತು. ಆದರೂ ಆಗಬಹುದು.'

'ದಿನವೆಲ್ಲ ಏನು ಯೋಚನೆ ಮಾಡುತ್ತೀಯೆ?'

'ನನ್ನ ಮಂತ್ರಗಳಿಹೆಯಲ್ಲ. ಸದಾ ಜಪ ಮಾಡುತ್ತೇನೆ. ನನಗಾವ ಬಾಧಕವೂ ಇಲ್ಲ, ಚಿಂತೆಯೂ ಇಲ್ಲ.'

'ಹಾಗಾದರೆ ಭಯವೆಲ್ಲ ಕಳೆದಿದೆಯೆ?'

'ನಿಜವಾಗಿ. ಶಾಂತಿ ಸಮುದ್ರದಲ್ಲಿ ಈಸುತ್ತಿದೇನೆ. ಇದೆಲ್ಲ ನೀವು ಕಲಿಸಿದುದು. ಹಿಂದಿನದೆಲ್ಲ ಮರೆತಿದೆ ನನಗೆ. ಆದರೆ ನಿಮ್ಮ ಗೀತಾಪ್ರವಚನ, 'ಮೋಕ್ಷಯಾತ್ರೆ'ಯ* ಪ್ರವಚನ ಮರೆತಿಲ್ಲ. ಭಂಗವಿಲ್ಲದ ಶಾಂತಿ ನನ್ನದು. ನಿಃಸ್ವಪ್ನ ನಿದ್ರೆ.'

ಗಾಂಧೀಜಿಗೆ ಪ್ರಶ್ನೆ ಕೇಳುವ ಚಪಲವಿಲ್ಲ; ಕುತೂಹಲವಿಲ್ಲ. ಅಪಾರ ಪ್ರೇಮದಿಂದ ಈ ಸಲ್ಲಾಪ ನಡೆಸಿದರು. ಕೆಲದಿನ ಬಿಟ್ಟು ಮತ್ತೆ ಕೇಳಿದರು.

'ಧ್ಯಾನದಲ್ಲಿ ಬೇರೆ ವಿಚಾರ ಬಂದು ತೊಂದರೆಯಾಗುತ್ತದೆಯೊ?'

'ಯಾವಾಗಲೂ ಇಲ್ಲ.'

'ಇಡೀ ದಿನದಲ್ಲಿ ಯಾವಾಗಲೂ ಇಲ್ಲವೆ?'

'ಹಾಗಲ್ಲ ಧ್ಯಾನದಲ್ಲಿ ಇಲ್ಲದಾಗ ನಿಮ್ಮ ಸಲ್ಲಾಪವನ್ನು ಕುರಿತು ಯೋಚಿಸುತ್ತೇನೆ.'

'ಸರಿ. ಸುತ್ತಲಿನ ದುಃಖ ನೋಡಿದಾಗ ಮನಸ್ಸಿಗೆ ನೋವಾಗುತ್ತದೆ ಎಂದೆಯಲ್ಲ ಮೊನ್ನೆ. ಆ ದುಃಖ ನಿವಾರಣೆಗೇನಾದರೂ ಪ್ರಯತ್ನ ಮಾಡಬೇಕೆನಿಸದೆ?'

'ಇಲ್ಲ. ಹಾಗೆಂದರೆ ವಿಚಿತ್ರವಾಗಿ ಕಾಣಬಹುದು'

'ಹಾಗಾದರೆ ಆ ನೋವಿಗೆ ಏನರ್ಥ?'

'ನನಗೇ ಆ ನೋವಾಗುತ್ತದೆ. ಆದರೆ ನನಗೇನು ಮಾಡಲೂ ಶಕ್ತಿಯಿಲ್ಲವೆನಿಸುತ್ತದೆ.'

---

* Piligrim's Progress: ಇಂಗ್ಲೀಷಿನಲ್ಲಿ ಸುಂದರವಾದ ಅಧ್ಯಾತ್ಮ ಗ್ರಂಥ.

'ನಿನ್ನ ಕಾಲಿಗೆ ಮುಳ್ಳು ಚುಚ್ಚಿದರೆ ನೀನದನ್ನು ಕಿತ್ತು ಹಾಕುತ್ತೀಯಲ್ಲವೆ ?'

'ಹೌದು.'

'ಹಸಿವಾದರೆ ಊಟ ಮಾಡುತ್ತೀಯಲ್ಲವೆ ?'

'ಮಾಡುತ್ತೇನೆ.'

'ಹಾಗೆಯೆ ಇನ್ನೊಬ್ಬರ ಕಾಲಿಗೆ ಮುಳ್ಳು ಚುಚ್ಚಿದರೆ ಅದನ್ನು ಕಿತ್ತು ಹಾಕಲು ನೀ ಸಹಾಯಮಾಡುತ್ತೀಯಲ್ಲವೆ? ಯಾರಾದರೂ ಹಸಿದವರಿದ್ದರೆ ಅನ್ನ ನೀಡುತ್ತೀಯಲ್ಲವೆ ?'

'ಕೈಲಾದರೆ ಮಾಡುತ್ತಿದ್ದೆ.'

'ಯಾರಿಗಾದರೂ ಬಹಳ ಸಂಕಟವಾಗುತ್ತಿದ್ದು, ನಿನ್ನ ಹೊರತು ಮತ್ತಾರೂ ಅವನಿಗೆ ದಿಕ್ಕಿಲ್ಲದಿದ್ದರೆ, ನೀನಾಗ ಅವನ ಬಳಿ ಕೂತು ಆರೈಕೆ ಮಾಡೆಯ ?'

'ಮಾಡುತ್ತಿದ್ದೆ. ಆದರೆ ನನ್ನಿಂದೇನೂ ಆಗದು. ನನ್ನ ಅಶಕ್ತತೆಯನ್ನು ಒಪ್ಪಿಕೊಳ್ಳುತ್ತೇನೆ.'

'ನಿನ್ನಂಥವನು ಹಾಗೆಲ್ಲ ಕರ್ತವ್ಯ ಲೋಪ ಮಾಡಲಾರೆ!'

ಬೈರಾಗಿ ಒಪ್ಪಿಗೆಯ ಮುಗುಳ್ನಗೆ ನಕ್ಕ.

'ಸುತ್ತಲಿನ ದುಃಖ ನಿನಗೆ ಸಂಕಟ ಉಂಟುಮಾಡುತ್ತದೆ. ಮೃತ್ಯು ತಾಂಡವ ಪ್ರತ್ಯಕ್ಷವಾಗಿ ನಿನಗೆ ಕಾಣುತ್ತದೆ ಎಂದಲ್ಲವೆ ನಾವು ಮಾತು ಪ್ರಾರಂಭಿಸಿದ್ದು.'

'ಹೌದು. ನಾನೇನುಮಾಡಲಿ? ನಾನು ನಿಶ್ಶಕ್ತ.'

'ಸರ್ವ ಪ್ರಯತ್ನವನ್ನೂ ಮಾಡಿ ಮುಗಿಸಿದವನು ನಾನಿನ್ನೇನೂ ಮಾಡಲಾರೆ ಎನ್ನಬಹುದು. ಅವನ ಪಾಲಿಗೆ ಉಪಚರಿಸಬೇಕಾದ ಅಂಗಹೀನ ಒಬ್ಬನಿದ್ದರೆ ತನ್ನ ಕೈಲಾದ ಎಲ್ಲ ಆರೈಕೆಯನ್ನೂ ಮಾಡಬೇಕು. ಅದೊಂದು ಸೇವೆಯೆ ಇಡೀ ಮಾನವ ಸೇವೆ ಇದ್ದಂತೆ.'

'ದುಃಖಿಗಳ ದುಃಖ ನಿವಾರಣೆಗಾಗಿಯೆ ಸದಾಕಾಲ ನಾ ಗಮನ ಕೊಡಲಾರೆ. ಏನೋ ಸ್ವಲ್ಪ ಮಾಡಬಹುದಾಗಲಿ ಬಲು ಬೇಗ ನನ್ನ ಅಶಕ್ತತೆ ತಿಳಿದೀತು.'

'ಈ ಜಗತ್ತು ನಡೆದಿರುವುದು ಸೇವೆಯಿಂದ, ತ್ಯಾಗದಿಂದ. ಗೀತೆಯಲ್ಲಿ ಹೇಳಿದಂತೆ*—ಜೀವರಾಶಿಯನ್ನು ಸೃಷ್ಟಿಸಿದಾಗಲೆ ಯಜ್ಞ (ತ್ಯಾಗ)ವನ್ನು ಅವರಿಗೆ ಹೊರಿಸಿದ ದೇವರು.

'ಬಲ್ಲೆ. ಆದರೆ ಧ್ಯಾನ, ಪೂಜೆಗಳೂ ಯಜ್ಞಕರ್ಮವಲ್ಲವೇ ?'

'ಬಲವಾದ ಪೆಟ್ಟಿಗೆಯಲ್ಲಿಟ್ಟು ಬೀಗ ಹಾಕುವಂಥ ಪ್ರತ್ಯೇಕ ಪದಾರ್ಥಗಳಲ್ಲ ಧ್ಯಾನ, ಪೂಜೆ. ನಮ್ಮ ಪ್ರತಿಯೊಂದು ಕೆಲಸದಲ್ಲೂ ಅವು ಕಾಣಬೇಕು. ಈಗಲೇ ಈ ಮಾತಿಗೆ ಉತ್ತರ ಕೊಡಬೇಕಾಗಿಲ್ಲ. ವಿಚಾರ ಮಾಡು. ಸದಾ ನಿನ್ನ ಯೋಚನೆ ನನಗೆ ಇದೆಯೆಂಬುದನ್ನು ನೀ ಬಲ್ಲೆ'

ಮರುದಿನ ಬೆಳಗ್ಗೆ ತನ್ನ ಪದ್ಧತಿಗೆ ವಿರೋಧವಾಗಿ ಭನಸಾಲಿ ಎಂದೂ ಬಾರದವನು ಪರ್ಣಶಾಲೆಗೆ ಬಂದ. ಗಾಂಧೀಜಿಗೆ ಚಿಂತಾಕಾರಣನಾದೆನಲ್ಲ ಎಂಬುದು ಆತನ ದುಃಖ. ಆದರೆ ತನ್ನ ಅಶಕ್ತತೆಯ ಮಾತು ಬಿಡಲಿಲ್ಲ.

'ಚಿಂತೆಯೇನು ಬಂತು ನನಗೆ ? ನನ್ನ ಭಾವನೆಯನ್ನು ನಿನಗೆ ತಿಳಿಸಬೇಕೆನಿಸಿತು ; ನಿನ್ನನ್ನು ಆ ಪ್ರಶ್ನೆ ಕೇಳಿದೆ.'

'ನನ್ನನ್ನು ಕೈ ಬಿಡಬೇಡಿ.'

'ಕೈ ಬಿಡುವ ಯೋಚನೆಯಿಲ್ಲ. ಆದರೆ ನಿನ್ನ ಮನಸ್ಸಿಗೆ ರುಚಿಸದ ಕೆಲಸ ಯಾವುದನ್ನೂ ಮಾಡಬೇಡ. ನಾ ಹೇಳುವುದನ್ನು ಹೇಳುತ್ತಲೆ ಇರುತ್ತೇನೆ. ಗುಹೆಯಲ್ಲೆ ಇರು, ಜನರ ನಡುವೆಯೆ ಇರು—ನಿನಗೆ ಸಮಸ್ತ ಶುಭವುಂಟು ; ನಾಬಲ್ಲೆ.'

ಮಾರನೆಯದಿನ ಸಂಜೆಗೆ ಮತ್ತೆ ಮುಂದರಿಯಿತು ಸಲ್ಲಾಪ.

'ನಾ ಹೇಳಿದ್ದೆಲ್ಲ ಕೇಳಿದ ಮೇಲೂ ನಿನ್ನ ಅಭಿಪ್ರಾಯ ಬದಲಾಗಲಿಲ್ಲ ಎಂದೆ ನೀನು. ಆದರೂ ಅದೇ ಮಾತನ್ನೆ ಮತ್ತೆ ಹೇಳುತ್ತೇನೆ.'

'ನಿಮಗೆ ಸರ್ವಾಧಿಕಾರ, ಬಾಪು. ನನ್ನ ಮನಸ್ಸು ಹೇಗೆ ಹರಿಯುತ್ತಿದೆಯೊ ನಿಮಗೆ ತಿಳಿಸಿದೆ, ಅಷ್ಟೆ.'

'ಬಲ್ಲೆ. ನಿನ್ನ ಮನಸ್ಸು ನನಗೆ ಗೊತ್ತು. ಆದರೂ ನನಗೆ ನಿನ್ನ ಮೇಲ್ಪಂಗ್ತಿ ಅನುಸರಿಸುವ ಮನಸ್ಸಿಲ್ಲವಲ್ಲ. ದೇಶದ ಮೂಲೆಯಿಂದ

---

* ಸಹಯಜ್ಞಾಃ ಪ್ರಜಾಃ ಸೃಷ್ಟ್ವಾ ಪುರೋವಾಚ ಪ್ರಜಾಪತಿಃ ।
ಅನೇನ ಪ್ರಸವಿಷ್ಯಧ್ವ ಮೇಷವೋಸ್ತ್ವಿಷ್ಟ ಕಾಮಧುಕ್ ॥

ಮೂಲೆಗೆ ನಿನ್ನ ಹಾಗೆ ಅಲೆಯಲು—ನನ್ನ ಮೈ ತಡೆದರೆ—ನನಗೆ ಬಲು ಇಷ್ಟ. ನಿನ್ನ ಹಾಗೆ ಬೇವಿನ ಸೊಪ್ಪು, ಹಸಿ ಹಿಟ್ಟು ತಿಂದಿರಲೂ ಇಷ್ಟವೆ. ಆದರೆ ನಿನ್ನ ಮಾರ್ಗದಲ್ಲಿ ದೊಡ್ಡ ತಪ್ಪೊಂದು ಇದೆ. ನಿನ್ನದೇ ಸರಿಯಾದ ದಾರಿ ಎಂದು ನನ್ನ ಸತ್ಯಶೋಧನ ಹೇಳಿದರೆ ನಾನು ನಿನ್ನ ದಾರಿ ತುಳಿಯಲೇಬೇಕು. ಆದರೆ ಅದರಲ್ಲಿ ಪ್ರಮಾದವಿದೆ ಅನಿಸಿದರೆ ನಿನಗದನ್ನು ತೋರಿಸಬೇಕಾದುದು ನನ್ನ ಕೆಲಸ. ನಿನ್ನ ಸೊಪ್ಪು ಹಿಟ್ಟಿನ ಬಗ್ಗೆ ನನಗೆ ಜಗಳವಿಲ್ಲ. ನಿನ್ನ ಜನ್ಮದ ಮುಖ್ಯ ನಿಯಮವನ್ನೆ—ನಮ್ಮೊಡನೆಯೆ ಹುಟ್ಟಿದ ಯಜ್ಞ ಕರ್ಮದ ತತ್ವವನ್ನು—ನೀನು ಅಸಡ್ಡೆ ಮಾಡಿದೀಯಲ್ಲ?'

'ಈ ಮಾತನ್ನು ಇನ್ನೂ ವಿವರಿಸಿ ಹೇಳಬೇಕು.'

'ಗೀತೆಯಲ್ಲಿ ಹೇಳಿದುದು ಗೊತ್ತಿಲ್ಲವೆ.'

ಇಷ್ಟಾನ್ ಭೋಗಾನ್ ಹಿ ವೋ ದೇವಾ ದಾಸ್ಯಂತೇ ಯಜ್ಞಭಾವಿತಾಃ ।
ತೈರ್ದತ್ತಾನಪ್ರದಾಯೈಭ್ಯೋ ಯೋ ಭುಂಕ್ತೇ ಸ್ತೇನ ಏವ ಸಃ ॥

ದಿನದಿನದ ಯಜ್ಞ ಮಾಡದೆ ತಿನ್ನುವವನು ಕಳ್ಳ. ಭೈಕ್ಷ್ಯ (ಬೇಡುವುದು) ಒಳ್ಳೆಯದೆ. ಆದರೆ ದಿನದ ಯಜ್ಞಕರ್ಮ ಮಾಡಿದ ಮೇಲೆಯೆ ಆ ಅಧಿಕಾರ.'

'ಗೀತಾ ಶ್ಲೋಕವನ್ನು ಬಲ್ಲೆ. ನೀವು ಮೊನ್ನೆ ಹೇಳಿದ್ದನ್ನೂ ಮಥನ ಮಾಡುತ್ತಿದೇನೆ. ಅಕರ್ಮಿಯಾದ ನನಗೆ ಸೊಪ್ಪು ಹಿಟ್ಟು, ತಿನ್ನಲು ತಾನೆ ಏನಧಿಕಾರ ಎಂದು ಯೋಚಿಸುತ್ತಿದೇನೆ.'

'ಶ್ಲೋಕವನ್ನು ಬಲ್ಲೆ ನೀನು. ಜಗತ್ತೇನೊ ಆ ತತ್ವವನ್ನು ಒಪ್ಪಿದೆ. ಜೈನ ಮುನಿಗಳೂ ಸನ್ಯಾಸಿಗಳೂ ಅದರಂತೆ ನಡೆಯುತ್ತಿದ್ದಾರೆ. ಅವರೂ ಭೈಕ್ಷ್ಯವನ್ನೆ ಅವಲಂಬಿಸಿದಾರೆ. ತಾವು ಮಾಡುವ ಉಪದೇಶವೆ ಯಜ್ಞ ಕರ್ಮ ಎಂದು ತಿಳಿದಿದಾರೆ ಅವರು. ಅವರ ಅಭಿಪ್ರಾಯ ತಪ್ಪೆಂದು ನನಗನಿಸುತ್ತದೆ. ಆಧ್ಯಾತ್ಮೋಪದೇಶ ಅವರ ಕರ್ತವ್ಯ; ನಿಜವೆ. ಆದರೂ ಯಜ್ಞಾರ್ಥವಾಗಿ ಕಾಯಕ ಮಾಡಬೇಕು. ತಮ್ಮ ಯಜ್ಞಕರ್ಮಕ್ಕೆ ಪ್ರತಿಫಲ ಬಯಸದೆ, ನಿಜವಾದ ಬ್ರಾಹ್ಮಣರಂತೆ, ದಾನದಿಂದ ಬದುಕಬೇಕು. ಮತ್ತೆ ಮತ್ತೆ ನಿನಗೆ ನಾ ಹೇಳುವುದು ಅದೇ. ನೀನೀ ಭ್ರಾಂತಿಯನ್ನು ಬಿಡಬೇಕು. ಅಕರ್ಮ ಸನ್ಯಾಸವಲ್ಲ. ಅದು ಸೋಮಾರಿತನ. ನಾನು ಬರಿ

ದುದಕ್ಕೆ ಇಡೀ ಪ್ರಪಂಚದ ಅನುಭವವೇ ಆಧಾರ; ನನ್ನ ಬಾಳೆ ಅದಕ್ಕೆ ಸ್ಪಷ್ಟವಾದ ಪ್ರಮಾಣ; ನಿನ್ನ ಪರಿವ್ರಾಜಕತನ ಬಿಟ್ಟು ನನ್ನ ಮೇಲಿನ ಪ್ರೀತಿಯಿಂದ ಇಲ್ಲಿಗೆ ಬಂದೆ. ದೇವರೇ ನಿನ್ನನ್ನು ಇಲ್ಲಿಗೆ ಕಳಿಸಿದ. ನಿನ್ನ ಪ್ರೀತಿಗೆ ನಾನೇನು ಕೊಡಲಿ? ಚಲೋ ಅನ್ನ ಕೊಡಲೆ? ನೀನದನ್ನು ಮುಟ್ಟಲಿಕ್ಕೂ ಇಲ್ಲ, ನಾ ಕೊಡಲಿಕ್ಕೂ ಇಲ್ಲ. ನನ್ನ ಶುದ್ಧ ಪ್ರೀತಿ ಹೇಳಿದಂತೆ ನಿನ್ನಿದಿರಿಗೆ ನನ್ನ ಮನವನ್ನು ತೋಡಿಕೊಳ್ಳಬೇಕು.'

'ನಿಮಗೆ ನಾ ಬಹು ಋಣಿ. ತಾವು ಹೇಳಿದುದನ್ನೆಲ್ಲ ಮಥನಿಸಿ ಕೊಳ್ಳುತ್ತೇನೆ.'



# ಚೊಕ್ಕ ಬಂಗಾರ

ಆಶ್ರಮದಲ್ಲಿದ್ದರೆ ಗಾಂಧೀಜೀಯ ಊಟ ಉಪಚಾರದ ಕೆಲಸ ಮೀರಾ ಬಾಯಿಯದು. ಕಸ್ತೂರಿಬಾಗೆ ಗಾಂಧೀಜಿಯ ಯೋಗಕ್ಷೇಮ ನೋಡಿಕೊಳ್ಳಲು ಬಿಡುವೆಲ್ಲಿ? ಇಡೀ ಆಶ್ರಮದ ಸಂಸಾರವೇ ಆಕೆಯ ತಲೆಯಮೇಲೆ. ಆದ್ದರಿಂದ ಗಾಂಧೀಜಿಯ ಸ್ವಂತ ಯೋಗಕ್ಷೇಮ ಮೀರಾ ಬಾಯಿಗೆ ಸೇರಿದ್ದು.

ಗಾಂಧೀಜಿಯ ಊಟ ಬಹಳ ಲಘು, ಬಹಳ ಮಿತ, ಒಂದು ಚೂರು ಗೋಧಿರೊಟ್ಟಿ, ಒಂದು ಹಿಡಿ ಬೇಳೆಯಕಟ್ಟು. ಬೆಂದದ್ದೋ ಹಸಿಯದೋ ಪಲ್ಯ, ಬೇವಿನ ಚಿಗುರಿನದೋ ಬೆಳ್ಳುಳ್ಳಿಯದೋ ಚಟ್ನಿ, ಸ್ವಲ್ಪ ಹಾಲೋ ಹಣ್ಣೋ—ಅದು ಮೇಕೆಹಾಲು ಟೊಮಾಟೋಹಣ್ಣು—ಬೇಳೆಪಲ್ಯ ಎರಡೂ ಸಪ್ಪೆ, ಚಟ್ನಿಯೂ ಅಷ್ಟೆ. ಈ ಊಟವನ್ನು ಅಣಿಮಾಡುವುದು ಮೀರಾ ಬಾಯಿಯ ಕೆಲಸ. ಆಕೆ ಊರಲ್ಲಿಲ್ಲದಿದ್ದರೆ ಮತ್ತಾರಾದರೂ ಮಾಡುತ್ತಾರೆ.

ಇದಲ್ಲದೆ ಗಾಂಧೀಜಿಯ ಸ್ನಾನ, ಬಟ್ಟೆಬರೆಯ ಮಡಿ ಆಕೆಯ ಕೆಲಸವೇ. ಗಾಂಧೀಜಿಯ ಸ್ನಾನ ನಮ್ಮ ಸ್ನಾನದ ಹಾಗೆ ಅಭಿಷೇಕವಲ್ಲ. ಅವರು ಮೈಮೇಲೆ ಸುಮ್ಮನೆ ನೀರು ಹುಯದುಕೊಂಡು ಮೀಯುವುದಿಲ್ಲ. ಇದು ಬರೀ ಶಾಸ್ತ್ರ. ನಮ್ಮ ಹೆಂಗಸರು ಎಮ್ಮೆಗೆ ಮೈ ತೊಳೆಸುವುದಿಲ್ಲವೆ? ಹಾಗೆ ನಾವೂ ಮೈ ತೊಳೆಯುವುದು ಎಂದೇ ಹೇಳಿಕೊಳ್ಳುತ್ತೇವೆ. ಗಾಂಧೀಜಿಗೆ ಆರೋಗ್ಯಧರ್ಮ ಪ್ರಥಮ ಧರ್ಮ. ಊಟ, ಮಜ್ಜನ, ಶೌಚಗಳಲ್ಲಿ ನೇಮ ಶುಚಿ ಇಲ್ಲದಿದ್ದರೆ ಆರೋಗ್ಯ ಉಳಿಯದು, ಆರೋಗ್ಯವಿಲ್ಲದೆ ಜೀವ ಬೆಳೆಯದು. ಹೀಗೆ ಗಾಂಧೀಜಿಯ ವಿಚಾರ. "ಆರೋಗ್ಯಧರ್ಮ"ವೆಂಬ ಪುಸ್ತಕವನ್ನೇ ಬರೆದಿದ್ದಾರೆ.

ಗಾಂಧೀಜಿಯ ಊಟ ಎಷ್ಟು ಲಘುವೋ ಸ್ನಾನ ಅಷ್ಟು ದೀರ್ಘ, ಒಂದು ಗಂಟೆ ಹೊತ್ತು ಮೀಯುತ್ತಾರೆ. ಹಿಂದಿನವರು ಆರೋಗ್ಯಕ್ಕೆ ಒಂದು ಸೂತ್ರ ಮಾಡಿಕೊಂಡಿದ್ದರು—ಶೀಘ್ರ ಭೋಜೀ ಚಿರಸ್ನಾಯಿ

ಎಂತ. ಗಾಂಧೀಜಿಯ ವಿಲಕ್ಷಣ ಆರೋಗ್ಯಕ್ಕೆ ಈ ಸೂತ್ರಾನುಸರಣೆ ಕಾರಣವೋ ಅಲ್ಲವೋ, ಅಂತೂ ಅವರೇನೋ ಕ್ಷೀರಭುಕ್ಭೋಜಿಯಲ್ಲ ಮಿತ ಭೋಜಿ, ಚಿರಸ್ನಾಯಿಯಷ್ಟೇ ಅಲ್ಲ.

ಗಾಂಧೀಜಿಯದು ತೊಟ್ಟಿ ಸ್ನಾನ. ತೊಟ್ಟಿಸ್ನಾನವೆಂದರೆ, ದೊಡ್ಡ ತೊಟ್ಟಿಯೊಂದರಲ್ಲಿ ನೀರುತುಂಬಿ, ಅದರ ನಡುವೆ ಎತ್ತರವಾದ ಮಣೆ ಹಾಕಿ ಕೊಂಡು ಬಿಲ್ಲಿನ ಹಾಗೆ ಮಲಗಿ, ಹೊಟ್ಟೆಯ ಮೇಲೆ ಚೆನ್ನಾಗಿ ಮಾಲೀಸು ಮಾಡುವುದು. ಎಡದಿಂದ ಬಲಕ್ಕೆ ಜಠರವನ್ನು ದುಂಡಾಗಿ ನೀವಿದರೆ ಉದರಶುದ್ಧಿ ಮಲಶುದ್ಧಿಯಾಗಿ ಆರೋಗ್ಯವೃದ್ಧಿಯಾಗುತ್ತದೆ. ಜೀವಕ್ಕೆ ತಂಪಾಗುತ್ತದೆ. ಜೊತೆಗೆ ಅಂಗಾಲು ತಲೆಗಳನ್ನು ತಿಕ್ಕಿದರೆ ಇನ್ನೂ ಹಿತ. ಸ್ನಾನಕ್ಕೆ ಮೊದಲು ಈ ಭಾಗಗಳಿಗೆ, ಸಾಧ್ಯವಿದ್ದರೆ ಇಡೀ ಮೈಗೆ ಎಣ್ಣೆಯ ಅಭ್ಯಂಜನವಾಗಬೇಕು.

ಈ ಮಜ್ಜನ ವಿಧಾನವನ್ನು ಗಾಂಧೀಜೀ ಜರ್ಮನಿಯ ಜಲ ವೈದ್ಯ ಲೂಯಿಕೂನಿಯಿಂದ ಕಲಿತರು. ಈ ಸ್ನಾನ ಒಂದು ಕಲೆ, ಒಂದು ವಿದ್ಯೆ.

ಗಾಂಧೀಜೀ ಉಡುವ ತುಂಡು ಪಂಚೆ ಸದಾ ಹಾಲಿನಹಾಗೆ ಬೆಳ್ಳಗೆ ನಿರಭ್ರ ಆಕಾಶದಹಾಗೆ ಸ್ವಚ್ಛವಾಗಿ ಇರುತ್ತದೆ. ಮೀರಾಬಾಯಿ ಅವರ ಬಟ್ಟೆಯನ್ನು ಬೆಳ್ಳಗೆ ಒಗೆದು ಮಡಿಮಾಡುತ್ತಾಳೆ.

ಮೀರಾಬಾಯಿ ಬಿಳೀ ಖಾದಿ ಸೀರೆಯುಟ್ಟ ಸನ್ಯಾಸಿನಿಯ ಹಾಗೆ ಇರುತ್ತಾಳೆ. ತಲೆಯಲ್ಲಿ ಕೂದಲಿಲ್ಲ. ಬೌದ್ಧಭಿಕ್ಷುಣಿಯರ ಹಾಗೆ ಮುಂಡನಮಾಡಿಕೊಂಡಿದಾಳೆ, ಮೈಮೇಲೆ ಒಂದಾದರೂ ಆಭರಣವಿಲ್ಲ. ಕೈಗೆ ಗಡಿಯಾರ ಕೂಡ ಇಲ್ಲ. ಉಟ್ಟ ಸೀರೆ ಕೂಡಾ ಮೈತುಂಬಾ ಇಲ್ಲ. ಉಟ್ಟ ರೀತಿಯಲ್ಲಿ ಪತಂಗದಂತೆ, ಅಲಂಕಾರ ತೆರೆತೆರೆಯಂತೆ ಹಾರುವ ನಿರಿಗೆಯೂ ಇಲ್ಲ. ಆಂಧ್ರದೇಶದ ವೈಷ್ಣವ ವೈದಿಕರು ಉಡುವ ಹಾಗೆ, ನಿರಾಡಂಬರ. ಮಾತು ಹಿಂದುಸ್ಥಾನಿ, ಆದರೂ ಆಕೆ ವಿಲಾಯಿತಿಯ ಹೆಂಗಸು, ಇಂಗ್ಲೀಷು ಹೆಂಗಸು ಎಂಬುದು ತಿಳಿಯದೆ ಹೋಗುವುದಿಲ್ಲ. ಆ ಬಣ್ಣ ಆ ಕಣ್ಣು, ಆ ಕಳೆ ಮಾಸುವುದು ಸಾಧ್ಯವಿಲ್ಲ.

ಮೀರಾಬಾಯಿ ಹುಟ್ಟು ಇಂಗ್ಲೀಷು ಹೆಂಗಸು. ಆಕೆಯ ಹೆಸರು ಮೆಡಿಲೇನ್ ಸ್ಲೇಡ್. ಆಕೆಯ ತಂದೆ ಬ್ರಿಟಿಷ್ ನೌಕಾ ದಳದಲ್ಲಿ ಒಬ್ಬ

ಅಧಿಪತಿ. ಹೆಸರು ಸರ್ ಎಡ್‌ಮಂಡ್ ಸ್ಲೇಡ್. ಬ್ರಿಟಿಷ್ ನೌಕಾದಳದ ವಿಚಿತ್ರ ಸಂಪ್ರದಾಯಗಳು ವಿಲಕ್ಷಣ ವರ್ತನೆ ಆಕೆಯ ಮನಸ್ಸಿಗೆ ಬೇಸರ ಹುಟ್ಟಿಸಿದವು. ಇಲ್ಲದ ಆಡಂಬರ, ಸಲ್ಲದ ಒಣಪ್ರತಿಷ್ಠೆ ಅದು. ಮೊದಲು ಇಂಗ್ಲೀಷು ಜನರ ಗುಂಪಿನಲ್ಲಿ ಅತ್ಯಂತ ಬೆಡಗುಗಾತಿಯಾಗಿದ್ದ ಅವಳು "ಬೊಂಬಾಯಿಯ ಬಿಂಕದ ಸಿಂಗಾರಿ" ಎಂದು ಹೆಸರಾಗಿದ್ದಳು.

ಆಳುವ ಕುಲಕ್ಕೆ ಸಹಜವಾದ ಸುಖಸಂಕಥಾ ವಿನೋದದ ವಿಲಾಸ ಪ್ರಿಯತೆ ಆಕೆಯ ಮುಮುಕ್ಷು ಜೀವಕ್ಕೆ ಬೇಸರವಾಯಿತು. ಈ ವ್ಯರ್ಥ ಜೀವನದಲ್ಲಿ ಏನಾದರೂ ಚೇತನ ಹುಟ್ಟಿಸಬೇಕೆಂದು ನಾನಾಬಗೆಯ ಗ್ರಂಥ ಗಳನ್ನು ಓದಲು ಮೊದಲಿಟ್ಟಳು. ಈ ಸುಖಮಯ ಜೀವನ ಬೇಡ, ಏನಾ ದರೂ ನಿಷ್ಠೆ ವ್ರತ ಬೇಕು ಎಂದು ಆಕೆಯ ಜೀವ ತುಡಿತುಕೊಳ್ಳಲಾರಂಭಿ ಸಿತು. ಅಧ್ಯಾತ್ಮದಾಹ ಮೊದಲಾಯಿತು.

ಆಗ ಗಾಂಧೀಜೀ ಹೊಸದಾಗಿ ತಮ್ಮ ಸಾಹಿತ್ಯಸೃಷ್ಟಿಗೆ ಕೈ ಹಾಕಿದ್ದರು. ಇಂಗ್ಲೆಂಡಿನಲ್ಲೂ ಅವರ ಯಂಗ್ ಇಂಡಿಯಾ, ಉಳಿದ ಪುಸ್ತಕಗಳು ಪ್ರಚಾ ರವಾಗಿದ್ದವು. ಸ್ಲೇಡಳವಾಸ ಇಂಗ್ಲೆಂಡಿನಲ್ಲಿ ಡೋರ್‌ಕಿಂಗಿನಲ್ಲಿ. ಆ ಊರಿನ ಶಾಂತ ಸನ್ನಿವೇಶದಲ್ಲಿ ಗಾಂಧೀ ಸಾಹಿತ್ಯವನ್ನು ಅರೆದು ಕುಡಿದಳು. ಮೆಡಿಲೇನ್ ಆ ಸಾಹಿತ್ಯದ ಪ್ರಭಾವಕ್ಕೆ ಮುಗ್ಧಳಾದಳು. ಆ ಪ್ರಭಾವ ಅಷ್ಟಿಷ್ಟಲ್ಲ, ಪೂರ್ಣ ಪ್ರಭಾವ. "ನಿಮ್ಮ ಸಾಬರ್ಮತಿ ಆಶ್ರಮದಲ್ಲಿ ವಿದ್ಯಾರ್ಥಿನಿಯಾಗಿರಲು ನನಗೆ ತುಂಬಾ ಬಯಕೆಯಾಗಿದೆ. ದಯವಿಟ್ಟು ನನ್ನ ಶಿಷ್ಯತ್ವವನ್ನು ಒಪ್ಪಿಕೊಳ್ಳಬೇಕು" ಎಂದು ಮೆಡಿಲೇನ್ ಬಾಪೂಗೆ ಪತ್ರ ಬರೆದಳು.

ಸಾಬರ್ಮತಿಗೆ ಸೇರುವುದು ಅಷ್ಟು ಸುಲಭದ ಮಾತಲ್ಲ. ಸಾಧಾರಣ ವಾಗಿ ಸುಖಜೀವಿಗಳನ್ನು ತಮ್ಮ ಬಳಿ ಸೇರಿಸುವ ಇಷ್ಟ ಗಾಂಧೀಜಿಗೆ ಇಲ್ಲ. ಅದರಲ್ಲೂ ವಿಲಾಯಿತಿ ಹೆಣ್ಣು. ಆಶ್ರಮವಾಸ ಆಕೆಗೆ ಬಹು ಕಷ್ಟ ವಾದೀತು. ಆಕೆಯ ಬಿನ್ನಹಕ್ಕೆ ಒಪ್ಪುವುದು ಬೇಡ ಎನಿಸಿತು ಗಾಂಧೀಜಿಗೆ. ಆದರೆ ತಮ್ಮ ಮನಸ್ಸಿನಂತೆಯೇ ತೀರ್ಪು ಹೇಳಿದರೆ ಅನ್ಯಾಯವಾದೀತು. ಅದಕ್ಕೆಂದು—ಒಂದು ವರ್ಷಕಾಲ ಕೆಲವು ವ್ರತಗಳನ್ನು ನಡೆಸುವಂತೆ ಸೂಚಿಸಿದರು. ಆ ವ್ರತಾನುಷ್ಠಾನದಲ್ಲಿ ತೇರ್ಗಡೆಯಾದರೆ ಆಕೆ ಆಶ್ರಮಕೆ

ಬರಲು ಅಡ್ಡಿಯಿಲ್ಲ. ಅದರಿಂದ ಪೂರ್ವ ಪಶ್ಚಿಮಗಳ ಐಕ್ಯಕ್ಕೆ ಸಹಾಯಕ ವಾಗುವುದಾದರೆ ಸಂತೋಷ ಎಂದರು.

ಆ ವ್ರತಗಳು ಇವು: ಮಾಂಸ ತಿನ್ನಬಾರದು; ಮದ್ಯ ಕುಡಿಯ ಬಾರದು; ಎಲ್ಲಾ ವಿಲಾಸಭೋಗವನ್ನೂ ಬಿಡಬೇಕು; ನೂಲುವುದನ್ನೂ ಹಿಂದೂಸ್ತಾನಿಯನ್ನೂ ಕಲಿಯಬೇಕು.

ಮೆಡಿಲೇನ್ ಗಟ್ಟಿಹೆಂಗಸು. ಈ ವ್ರತದೀಕ್ಷೆ ತೊಟ್ಟಳು. ತನ್ನ ಬಾಳನ್ನೇ ಬದಲಿಸಿದಳು. ಆಕೆಯ ಗೆಳತಿಯರಿಗೆಲ್ಲಾ ಗಾಬರಿ; ತಮ್ಮ ಗೆಳತಿ ಹೀಗೆ ಹುಚ್ಚಿಯಾದಳಲ್ಲ ಎಂತ. ಆದರೆ ಮೆಡಿಲೇನ್‌ಗೆ ಮಾತ್ರ ಆ ವ್ರತ ಜೀವನ ತುಂಬಾ ಆನಂದಮಯವಾಗಿತ್ತು. ಒಂದು ವರುಷದ ದೀಕ್ಷಾ ಕಾಲವನ್ನು ಮುಗಿಸಿ ಮತ್ತೆ ತನ್ನ ಗುರುವಿಗೆ ತನ್ನ ಆಶ್ರಮವಾಸದ ಬಯಕೆ ಯನ್ನು ತಿಳಿಸಿದಳು. ಸರಿಯಾಗಿ ವರ್ಷ ಮುಗಿದ ದಿನ ಗಾಂಧೀಜಿಯ "ಹೃದಯ ಕುಂಜ"ಕ್ಕೆ–ಅದು ಸಾಬರ್ಮತಿಯಲ್ಲಿ ಅವರ ಗುಡಿಸಿಲಿನ ಹೆಸರು—ಮೆಡಿಲೇನಳ ತಂತಿ ಬಂದು ಮುಟ್ಟಿತು. ಈ ಏಕಲವ್ಯ ಭಕ್ತಿ, ದೃಢಸಂಕಲ್ಪಗಳಿಗೆ ಸೋತು ಗಾಂಧೀಜೀ ಆಕೆಯನ್ನು ಶಿಷ್ಯೆಯಾಗಿ ಒಪ್ಪಿ, ಆಶ್ರಮಕ್ಕೆ ಬರಲು ಪತ್ರ ಬರೆದರು.

ಕೂಡಲೇ ಇಂಗ್ಲೆಂಡಿಗೆ ಕೊನೆಯ ನಮಸ್ಕಾರ ಮಾಡಿ ಮೆಡಿಲೇನ್ ಅಹಮದಾಬಾದಿಗೆ ಬಂದಳು. ಆಕೆಯ ಆನಂದಕ್ಕೆ ಪಾರವೇ ಇಲ್ಲ. ಸಾಬರ್ಮತಿಯ ಆಶ್ರಮವಾಸಿಗಳಿಗೆ ಒಬ್ಬ ಅಕ್ಕ ದೊರೆತಂತಾಯಿತು. ಬಹು ಬೇಗನೆ ಅವರಲ್ಲಿ ಬೆರೆತು ಒಂದಾಗಿ ಹೋದಳು. ಆಗಲೇ ಗಾಂಧೀಜೀ ಮೆಡಿಲೇನ್‌ಗೆ ಮೀರಾ ಎಂದು ನಾಮಕರಣ ಮಾಡಿದರು. ಮೀರಾ ರಾಜ ಪುತಾನದ ಮಹಾ ಪತಿವ್ರತೆ, ಪರಮಭಕ್ತೆ. ನಮ್ಮ ನಾಡಿನ ಮಹಾದೇವಿ ಯಕ್ಕನ ಹಾಗೇ ಆಕೆಯ ಬಾಳು. ಆ ಹೆಸರನ್ನು ಈಕೆಗೆ ಇಟ್ಟು, ಗಾಂಧೀಜೀ ಈ ಇಂಗ್ಲೀಷ್ ಯುವತಿಯನ್ನು ಶಿಷ್ಯೆಯಾಗಿ ಮಾಡಿಕೊಂಡರು.

ಆಶ್ರಮದಲ್ಲಿ ಮೀರಾಬಾಯಿ—ಗುಜರಾತಿನವರು ಅಕ್ಕ ಎನ್ನಲು ಬೇನ್ ಎನ್ನುತ್ತಾರೆ; ಸಂಸ್ಕೃತದ ಭಗನಿ ಅದು—ಮಾಡದ ಕೆಲಸವಿಲ್ಲ. ಎಲ್ಲ ಕಡೆಯೂ ಆಕೆಯೇ. ಕಸ ಗುಡಿಸುವುದು, ಕಕ್ಕಸು ಗುಡಿಸುವುದು, ನಮ್ಮಲ್ಲೀ ಹಣವಂತರಿಗೆ ವಾಕರಿಕೆ ಬರುವ ಕೆಲಸ. ಇಂಗ್ಲೀಷ್ ದೇಶದ

ಅದರಲ್ಲೂ ಶ್ರೀಮಂತರ ಮನೆಯ ಹುಡುಗಿಗೆ ಎಷ್ಟು ಅಸಹ್ಯವಾಗಿರಬೇಕು ? ಮೀರಾ ಮೋರೆ ಸಿಂಡರಿಸಲಿಲ್ಲ, ಮನ ನೋಯಲಿಲ್ಲ, ಹಸಾದವೆಂದು ಗುರು ಹೇಳಿದ ಕೆಲಸವನ್ನು ಮಾಡಿದಳು. ಆಕೆಯ ಕುಲ ಗೋತ್ರ, ಮನೆತನದ ಸ್ಥಿತಿ, ಆಕೆಯ ಶಿಕ್ಷಣಗಳನ್ನು ನೆನೆದರೆ ಮೀರಾ ಎಷ್ಟು ಮನೋನಿಗ್ರಹ ಮಾಡಿದಳೋ ಈ ಆಶ್ರಮವಾಸ ಒಗ್ಗಲಿಕ್ಕೆ ! ಕುಲಮದ, ವಿದ್ಯಾಮದ, ಧನಮದಗಳನ್ನು ಆಕೆಯು ಹಾಗೆ ಗೆದ್ದವರು, ಸದ್ದಿಲ್ಲದೆಯೇ ಗೆದ್ದವರು, ನಮ್ಮ ದೇಶದ ನಾಯಕಿಯರಲ್ಲೂ ಬಲು ಕಡಮೆ.

ಮೊದಮೊದಲು ಮೀರಾಬಾಯಿ ಖಾದಿ ವಿದ್ಯಾ ಪಾರಂಗತಳಾಗುವ ಪ್ರಯತ್ನ ಮಾಡಿದಳು. ಹಿಂದೂಸ್ತಾನದ ಅಮೋಘ ಸಂಪತ್ತಾದ ಈ ಗೃಹೋದ್ಯೋಗವನ್ನು ನಾಶಮಾಡಿದ ಇಂಗ್ಲೀಷರ ಪ್ರತಿನಿಧಿಯಲ್ಲವೆ ಆಕೆ. ಪ್ರಾಯಶ್ಚಿತ್ತರೂಪವಾಗಿಯಾದರೂ ಆಕೆ ಖಾದೀ ವಿದ್ಯೆಯಲ್ಲಿ ನಿಪುಣಳಾಗಬೇಕು. ಇವೊತ್ತಿಗೂ ರಾಷ್ಟ್ರನಿರ್ಮಾಣ ಕಾರ್ಯದಲ್ಲಿ ಖಾದೀ ಕಾರ್ಯಕ್ರಮವೇ ಮೀರಾಬಾಯಿಗೆ ಹೆಚ್ಚು ಪ್ರೀತಿ. ಸೇವಾಗ್ರಾಮದಲ್ಲಿರಲಿ, ಗಡಿನಾಡಿನ ತನ್ನ ಆಶ್ರಮದಲ್ಲಿರಲಿ ಖಾದೀ ಕೆಲಸ ಆಕೆಯದು.

ಅಂತೆಯೇ ೧೯೩೦ ರಲ್ಲಿ ಬೇರೆಬೇರೆ ಪ್ರಾಂತಗಳ ಖಾದೀ ಕೇಂದ್ರಗಳನ್ನು ಪರಿಶೀಲಿಸಿ ವರದಿ ಮಾಡಲು ಮೀರಾಬಾಯಿಯನ್ನು ಕಳಿಸಿದ್ದರು ಗಾಂಧೀಜೀ. ಈಗಲೂ ತನ್ನ ಆಶ್ರಮದಲ್ಲಿ ಕೂತು ದಿನಕ್ಕೆ ೮-೧೦ ಗಂಟೆ ನೂಲುತ್ತಾಳೆ. ಅದೊಂದು ವ್ರತ ಆಕೆಗೆ.

ಮೀರಾಬಾಯಿಯ ಈ ಕಾರ್ಯೋತ್ಸಾಹವೇ ಸೇವಾ ಗ್ರಾಮದ ಜನ್ಮಕ್ಕೆ ಕಾರಣ. ಗಾಂಧೀಜೀ ವರ್ಧಾಕ್ಕೆ ಬಂದಾಗ ಮೀರಾಬಾಯಿ ತನ್ನ ಗ್ರಾಮ ಸೇವಾ ಕಾರ್ಯಕ್ಕೆಂದು ಜಮುನಾಲಾಲ ಬಜಾಜರ ಹಳ್ಳಿಗೆ ಬಂದಳು. ಒಂದು ಗುಡಿಸಲನ್ನು ಕಟ್ಟಿಕೊಂಡಳು. ತರುವಾಯ ಗಾಂಧೀಜಿಯೂ ಅಲ್ಲಿಗೆ ಬಂದರು. ಅವರ ಹಿಂದೆ ಇಡೀ ಲೋಕವೇ ಬಂತು.

ಈಗ ಮೀರಾಬಾಯಿ ಗಡಿನಾಡಿನಲ್ಲಿ ಬೇರೊಂದು ಆಶ್ರಮ ಕಟ್ಟಿದಾಳೆ. ಆಕೆಯದು, ಮಹದೇವಭಾಯಿ ಹೇಳಿದ ಹಾಗೆ ತಿರುಗಲ ತಿಪ್ಪಿ ರಕ್ತ, ಒಂದೇಕಡೆ ಬಹುಕಾಲ ನಿಲ್ಲಲಾರಳು.

ಮೀರಾಬಾಯಿ ಆಶ್ರಮವಾಸಿಯಾಗಿ ೧೭-೧೮ ವರ್ಷವಾಯಿತು. ಒಂದುಸಲವಾದರೂ ಆಕೆ ಆತ್ಮವೃತ್ತಾಂತವನ್ನು ಆಡಿದುದಿಲ್ಲ. ಗಾಂಧೀಜಿಯ ಶಿಷ್ಯೆಯಾಗಿ ತನ್ನ ಬಾಳು ಅರಳಿ ಆನಂದಮಯವಾಯಿತೇ, ದುಃಖಮಯ ವಾಯಿತೇ, ಭಾರತವನ್ನು ತನ್ನ ತಾಯಿನಾಡು ಎಂದು ತಿಳಿಯಬಲ್ಲ ಮನಸ್ಸು ತನಗೆ ಬಂತೇ, ಈ ಮಹಾ ಗುರುವಿನ ಅಡಿಯಲ್ಲಿ ತನ್ನ ಜೀವ ಸಾರ್ಥಕ ವಾಯಿತೇ ಇದು ಯಾವುದೂ ತಿಳಿಯುವ ಹಾಗೆ ಇಲ್ಲ. ಆಕೆಯ ಕರ್ಮ ಯೋಗದಲ್ಲಿ ಇಂಥ ಯಾವ ಮಾತಿಗೂ ಎಡೆಯೇ ಇಲ್ಲ. ಅಷ್ಟು ಅದ್ಭುತ ವಾದ ಆತ್ಮತ್ಯಾಗ, ಅಹಂಕಾರ—ಲಯ ಆಕೆಯದು. ಮಹದೇವ ಭಾಯಿಯೇ ಒಮ್ಮೆ ಹೇಳಿದರು: “ಮಹಾತ್ಮರ ಆದರ್ಶಗಳನ್ನು ಪಾಲಿಸ ಬೇಕೆಂಬ ಆಶೆಯಲ್ಲಿ ಆಶ್ರಮವಾಸಿಗಳು ಯಾರೂ ಕಡಮೆಯಿಲ್ಲ. ಆದರೆ ನಮ್ಮೆಲ್ಲರಿಗಿಂತಲೂ ಮೀರಾಬಾಯಿಗೆ ಸಂಯಮ ಹೆಚ್ಚು ಎಂಬುದರಲ್ಲಿ ಸಂದೇಹವಿಲ್ಲ.”

ಒಂದೇ ಒಂದು ಸಲ ಆಕೆ ಈ ಆತ್ಮವೃತ್ತಾಂತವನ್ನು ಆಡಿದಳು. ೧೯೩೦ ರಲ್ಲಿ ಗಾಂಧೀಜೀ ಇಂಗ್ಲೆಂಡಿಗೆ ಹೋದಾಗ ಮೀರಾಬಾಯಿಯೂ ಜೊತೆಗೆ ಇದ್ದಳು. ಅಲ್ಲಿ ಪತ್ರಿಕೋದ್ಯೋಗಿಗಳು ಆಕೆಯನ್ನು ಮುತ್ತಿದರು. ಆಕೆಯ ಬಾಳು ಹೇಗಿದೆ? ತವರುಮನೆಯಕಡೆ ಮನಸ್ಸಾಗದೆ? ಹಿಂದು ಸ್ಥಾನ ಒಗ್ಗಿತೆ? ಗಾಂಧೀಜಿಯ ಕಠಿಣ ಜೀವನಕ್ಕೆ ತನ್ನ ಜೀವ ತಡೆಯಿತೆ? ಇತ್ಯಾದಿ ಪ್ರಶ್ನೆಗಳ ಸುರಿಮಳೆ.

ಮೀರಾಬಾಯಿ ನಗುನಗುತ್ತ ಹೇಳಿದಳು: “ಕಾರ್ಯಾರ್ಥವಾಗಿ ಇಂಗ್ಲೆಂಡಿಗೆ ಬಂದೆ, ಇಲ್ಲದಿದ್ದರೆ ಬರುತ್ತಿರಲಿಲ್ಲ. ಇಲ್ಲಿಗೆ ಬಂದದ್ದು ನನಗೆ ಯಾವುದೋ ಒಂದು ಪರದೇಶಕ್ಕೆ ಬಂದಹಾಗಿದೆ. ನನ್ನ ಜೀವ ಹಿಂದೂ ಸ್ಥಾನದಲ್ಲೇ ಇದೆ. ಎಂದಿಗೂ ಅಲ್ಲೇ ಇದ್ದೀತು.”

ಮೀರಾಬಾಯಿ ಗಾಂಧೀಜಿಗೆ ಹೆಣ್ಣುಜೀವದ ಮೇಲೆ ಇರುವ ಅದ್ಭುತ ಪ್ರಭಾವದ ದೃಷ್ಟಾಂತ. ಮೀರಾಬಾಯಿಯ ಹಾಗೆ ಒಡಲ ದಂಡಿಸುವ, ಕರ್ಮಯೋಗದಲ್ಲಿ ನಿರತರಾದ ವಿನೋಬಾ, ಭನ್ಸಾಲಿ—ಕೇವಲ ಗಾಂಧೀಜಿಯ ಪ್ರಭಾವದಿಂದಲೇ ವಿರಕ್ತರಾಗಿರಲಿಲ್ಲ. ಅವರ ಹುಟ್ಟುಗುಣ ಅದು. ಮೀರಾಬಾಯಿಗೆ ಅಂಥ ಕುಲಧನವೇನೂ ಇರಲಿಲ್ಲ.

ವಿರಕ್ತಿಗೆ ಗಾವುದದೂರವಾದ ಶ್ರೀಮಂತಿಕೆ. ಅಂಥ ಜೀವ ಹೀಗೆ ಆಗಬೇಕೆ ?

ನಿಜವಾಗಿ ಮೀರಾಬಾಯಿ ಗಾಂಧೀಜಿಯ ಪವಾಡ! ಹಿತ್ತಾಳೆ, ಕಬ್ಬಿಣವನ್ನೂ ಚೊಕ್ಕಬಂಗಾರವಾಗಿ ಮಾಡಬಲ್ಲ ರಸಗ್ಸೆ ಪರುಸಗ್ಸೆ ಅವರದು.



# ಕಸ್ತೂರಿಬಾ

ಹಿಮಾಚಲದಂತೆ ದಿಗಂತವನ್ನೆಲ್ಲಾ ಹಬ್ಬಿ ನಿಂತ ಗಾಂಧೀಜಿಯ ಅದ್ಭುತ ವ್ಯಕ್ತಿತ್ವದ ಹಿನ್ನೆಲೆಯಲ್ಲಿ ಕರಗಿ ನಿಂತ ಕಸ್ತೂರಿಬಾನ ವ್ಯಕ್ತಿತ್ವ ಬಹುಜನಕ್ಕೆ ಪರಿಚಯವಿಲ್ಲ. ಎಲೆಯ ಮರೆಯ ಹೂವಿನಬಾಳು ಅವರದು. ಗಿಡದಬಳಿ ಹೋದವರಿಗೆ ಸುಮ ಸೌರಭದ ಅಮೃತಾನುಭವವಾದೀತಾಗಲಿ ಆ ಕುಸುಮ ಕಣ್ಣಿಗೆ ಕಾಣದು. ಹಾಗೇ ಬಾನ ಬಾಳು. ಗಾಂಧೀಜಿಯ ಬಾಳು ಬೀರಿದ ಪರಿಮಳ ಕಸ್ತೂರಿಬಾನಿಂದ ಬಂದದ್ದು ಎಂಬುದು ಗಾಂಧೀ ಜಿಯೆ ಬಾಯಿಬಿಟ್ಟು ಹೇಳದೆ ಹೋಗಿದ್ದಿದ್ದರೆ ಯಾರಿಗೂ ಗೊತ್ತೇ ಆಗುತ್ತಿರ ಲಿಲ್ಲ. ಆದರೆ, ಕಸ್ತೂರಿಯ ಪರಿಮಳವನ್ನು ಮುಚ್ಚಿಡಲು ಯಾರಿಂದ ಸಾಧ್ಯ ?

*    *    *    *

ಗಾಂಧೀಜೀ ಆತ್ಮಕಥನ ರೀತಿಯಲ್ಲಿ ಎಂದೂ ಹೆಚ್ಚು ಮಾತಾಡರು ; ಆಡಿದರೆ ಒಂದೋ ಎರಡೋ. ಅದೂ ಭಾವ ಎದೆತುಂಬಿ ಬಂದಾಗ ; ಬರೀ ಮಾತಿಗೇನು ಬಲುಮೆಯಿದೆ ಭಾವದ ಜೀವವಿಲ್ಲದಿದ್ದಾಗ. ಅಂಥ ಭಾವ ಎದೆತುಂಬಿ ಹೊರಸೂಸಿದ ಸಂದರ್ಭಗಳಲ್ಲಿ ಬಾಪು ಬಾ ವಿಷಯವಾಗಿ ಒಂದೊಂದು ಮಾತನ್ನಾಡಿದಾರೆ. ಅವೇ ಸಾಕು, ಅವರು ಕಸ್ತೂರಿಬಾಗೆ ಯಾವ ಸ್ಥಾನ ಕೊಡುತ್ತಿದ್ದರು, ಆಕೆಯ ಬಗ್ಗೆ ಅವರಿಗಿದ್ದ ಪ್ರೇಮ ಎಷ್ಟು ಆಳವಾದುದು ಎಂದು ತೋರಿಸಲು. 'ಹಿಂದೂ ಧರ್ಮ ನನ್ನ ಹೆಂಡತಿ ಇದ್ದಹಾಗೆ' ಎಂದು ಹೇಳಿದಾರೆ ಒಂದು ಕಡೆ ಗಾಂಧೀಜೀ. ಧರ್ಮ ಅವರಿಗೆ ಜೀವದ ಉಸಿರು, ಮೈಯ ನೆತ್ತರು ಎಂದು ಗೊತ್ತಿದ್ದವರಿಗೆ ಬಾಪೂಜೀ ಹೆಂಡತಿಗೆ ಕೊಟ್ಟ ಹಿರಿಯಸ್ಥಾನ ಎಂಥದೆಂದು ಇದರಿಂದ ಅರಿ ವಾಗುತ್ತದೆ. 'ನನ್ನ ಹೆಂಡತಿಯಂತೆ ನನ್ನ ಹೃದಯವನ್ನು ಕಲಕಬಲ್ಲವರು ಮತ್ತೊಬ್ಬರಿಲ್ಲ' ಎಂದಿದಾರೆ. ಅಸಹಕಾರ ಚಳುವಳಿಯ ಸಂದರ್ಭದಲ್ಲಿ, ಬಾ ಬಳಿ ಇಲ್ಲದಾಗ ಗಾಂಧೀಜೀ ಸೆರೆ ಸೇರಿದರು. ಹತ್ತಿರಿದ್ದವರು 'ಆಕೆಗೆ

ಏನು ಹೇಳಬೇಕು ?' ಎಂದದ್ದಕ್ಕೆ ' ಆಕೆಗೆ ಏನು ಹೇಳುವುದು. ಆಕೆ ಧೀರ ಸತಿ ' ಎಂದು ಮೆಚ್ಚಿಗೆಯ ಮಕುಟವಿಟ್ಟರು ಹೆಂಡತಿಯ ತಲೆಯ ಮೇಲೆ.

ಬಾಪೂ ಯಾರನ್ನೂ ಹೊಗಳುವುದು ಕಷ್ಟ ; ಅರ್ಹತೆ ಬಿದ್ದಾಗಲೂ ಹೊಗಳುವುದು ಅಪರೂಪ. ಎಂತಲೇ ಅಪ್ಪಿ ತಪ್ಪಿ ಅಂಥ ಮೆಚ್ಚುಗೆಯ ಮಾತು ಒಂದು ಬಂದರೆ ಅವರ ಜನ್ಮ ಪಾವನವಾಯಿತೆಂದೇ ! ಈ ಅಪೂರ್ವ ಭಾಗ್ಯ ಬಾಗೆ ಹಲವಾರು ಬಾರಿ ದೊರೆತಿದೆ. ಆದರೆ ಇದಕ್ಕಾಗಿ ಆಕೆ ಸಹಿಸ ಬೇಕಾದ ಕಷ್ಟ, ಮಾಡಬೇಕಾದ ತ್ಯಾಗ, ಮಾತಿಗೆ ಮೀರಿದ್ದು.

* * * *

ತಮ್ಮ ಆತ್ಮಕಥೆಯಲ್ಲಿ ವಿವಾಹದ ವಿಷಯವನ್ನು ಬರೆಯುತ್ತಾ ಗಾಂಧೀಜೀ ' ಮದುವೆಯಾದಾಗ ನಮ್ಮಿಬ್ಬರಿಗೂ ಒಂದೇ ವಯಸ್ಸು, ಆದರೂ ಮದುವೆಯಾದ ಕೂಡಲೇ ನಾನು ಪತಿ ಪದವಿಯ ಅಧಿಕಾರ ವಹಿಸಿ ' ಆಳಲಾರಂಭಿಸಿದ ' ಎಂದು ಬರೆದಿದಾರೆ. ಜೀವನದ ಉದ್ದಕ್ಕೂ ಬಾ ಮೇಲೆ ಗಾಂಧೀಜಿಯದು ಇದೇ ಹಿಡಿತವೇ ; ಎಂದೂ ಸಡಲಿಸಲಿಲ್ಲ. ಸಹ ಸ್ರಾರು ರೂಪಾಯಿ ಉತ್ಪನ್ನವಿದ್ದ ಉದ್ಯೋಗವನ್ನು ಬಿಟ್ಟು ಸತ್ಯದ ಹಂಬಲಿ ತಿಂದ ನಿತ್ಯಸಂಕಟ, ಚಿರಯಾತನೆಗೆ ಆಹ್ವಾನ ಕೊಡುವಾಗ ಸುಖ ದುಃಖಕ್ಕೆ ಪಾಲುಗಾತಿಯಾದ ಬಾನನ್ನು ಒಂದು ಮಾತೂ ಕೇಳಲಿಲ್ಲ. ನಗರದ ಕೃತಕ ಜೀವನ ತಮಗೆ ಬೇಸರವಾಗಿ ಆಶ್ರಮಜೀವನವನ್ನು ಆರಂಭಿಸಿದಾಗ, ಹರಿ ಜನರನ್ನು ಮನೆಯಲ್ಲಿ ತರಲು ನಿಶ್ಚಯಿಸಿದಾಗ, ಯಾವಾಗಲೂ ಅಷ್ಟೆ, ತಮಗೆ ಸಿಹಿಯಾದದ್ದು ಹೆಂಡತಿಗೂ ಸಿಹಿಯಾಗಬೇಕು ಎಂಬ ಸರ್ವಾಧಿ ಕಾರದ ಮನೋಭಾವ. ಬಾ ಕೂಡಾ ಹಾಗೆ ಎಂದೂ ಅವರಿಗೆ ಬೇಕಾದದ್ದು ತನಗೆ ಬೇಡ ಎಂದು ಹೇಳಿಲ್ಲ. ಗಾಂಧೀಜೀ ಬಾಳಿನಲ್ಲಿ ಮಾಡಿದ ಪ್ರಯೋಗ ಗಳಿಂದ, ಬಾನ ಸಂಪ್ರದಾಯಬದ್ಧ ಜೀವ ಎಷ್ಟೋ ಬಾರಿ ಬೆಚ್ಚಿಬಿದ್ದಿದೆ. ಎಷ್ಟೋಸಲ ಗಂಡ ಮಾಡುತ್ತಿದ್ದುದು ಸರಿಯಲ್ಲ ಎನಿಸಿದೆ. ಆದರೆ ಆತ ನನ್ನು ಎಂದೂ ಸ್ಪಷ್ಟವಾಗಿ ನಿಂತು ಪ್ರತಿರೋಧಿಸಿಲ್ಲ, ತನ್ನದೇ ಸರಿ ಎಂಬ ಹಠಸಾಧನೆಗೆ ಕೈ ಹಾಕಿಲ್ಲ. ಮೌನವಾಗಿ ಸಹಿಸಿ, ತಾಳ್ಮೆಯಿಂದ ಅವರು ಹೇಳಿದ ಹಾಗೆ ಮಾಡು ಮಾಡುತ್ತಲೇ ಬುದ್ಧಿಗಲಿಸಿದಾರೆ. ಈಕೆಯ ಸಹನೆ ಗಾಂಧೀಜಿಗೆ ಸತ್ಯಾಗ್ರಹದ ಬೆಳಕು ತೋರಿತು. ಅಹಿಂಸೆಯನ್ನು ನಂಬಿದ

ವಿಸ್ತಸ್ತ್ರೀರಿಗೆ ಇದಿರಾಳಿಯನ್ನು ಗೆಲ್ಲುವ ದಾರಿ ತೋರಿಸಿತು. ಅದೇ ಮಾತನ್ನು ಬಿಚ್ಚಿ ಹೇಳಿದಾರೆ, ಗಾಂಧೀಜೀ 'ಅಹಿಂಸೆಯಲ್ಲಿ **ಬಾ** ನನ್ನ ಗುರು' ಎಂದು.

**ಬಾ** ಗಾಂಧೀಜೀಗೆ ಗುರುವಾಗುವ ಯೋಗ್ಯತೆ ಪಡೆದರೆ, ಅದು ಗಾಂಧೀಜೀ ಆಕೆಯನ್ನು ಪಳಗಿಸಿದ್ದರ ಫಲ. ದಿವ್ಯ ವಿಗ್ರಹವಾಗಬಲ್ಲ ಮೃದುವಾದ ಅಮೃತಶಿಲೆ ಅವರು. ಅದನ್ನು ಪರಿಪೂರ್ಣ ವಿಗ್ರಹವಾಗಿ ಕೆತ್ತಿದಾರೆ ಗಾಂಧೀಜೀ. ಈ ಕಾರ್ಯವನ್ನವರು ಮಮತೆ, ಮೋಹವನ್ನು ಪೂರಾ ಮರೆತು ಮಾಡಿದಾರೆ; ಹತ್ತಾರು ವಿಧಾನ ಉಪಯೋಗಿಸಿದಾರೆ. ಒಮ್ಮೆ ನಿಷ್ಠುರತೆಯ ಸಿಡಿಲು ತೂರಿದರೆ, ಮತ್ತೊಮ್ಮೆ ಮಮತೆಯ ಮಂತ್ರ ಹಾಕಿದಾರೆ. ಆಶ್ರಮವಾಸಿಗಳಿಗೆ ಅಸಂಗ್ರಹ ಮೊದಲ ನಿಯಮ. ಒಮ್ಮೆ ಏಕೋ ಇರಲಿ ಎಂದು **ಬಾ** ಒಂದೆರಡು ರೂಪಾಯಿ ಇಟ್ಟುಕೊಂಡಿದ್ದರೆ ಈ ಅಲ್ಪ ತಪ್ಪಿಗಾಗಿ ಸಂಜೆಗೆ ಸೇರಿದ ಬಹಿರಂಗ ಪ್ರಾರ್ಥನಾ ಸಭೆಯಲ್ಲಿ, ಆಕೆಯನ್ನು ತಾಯಿ ಎಂದು ತಿಳಿದು ಗೌರವಿಸುತ್ತಿದ್ದ ಆಶ್ರಮವಾಸಿಗಳ ಇದುರಿನಲ್ಲೇ ಕಠಿಣವಾಗಿ ಛೀಮಾರಿ ಮಾಡಿಬಿಟ್ಟರು. ಆಗ **ಬಾ** ಎಷ್ಟು ನಾಚಿ ನೀರಾದರೋ! ಅದು ಆ ಹೆಣ್ಣು ಹೃದಯಕ್ಕೇ ಗೊತ್ತು. ಇನ್ನೊಮ್ಮೆ ಆಕೆಗಾಗಿ ತಾವು ಉಪ್ಪನ್ನು ಬಿಟ್ಟು ಮಮತೆಯ ಮೋಡಿ ಹಾಕಿದರು. ಕಠಿಣವಾದ ಉಳಿಯ ಪೆಟ್ಟಂತೂ ಕೋಟಿ ಬಿದ್ದಿವೆ. ಪರಜಾತಿಯ ಗುಮಾಸ್ತನ ಎಂಜಲು ತೊಳೆಯುವಾಗ ಕಣ್ಣಲ್ಲಿ ಕಂಬನಿ ತುಂಬಿದ್ದಕ್ಕೆ, ದೂರದ ದೇಶದಲ್ಲಿ ಮನೆಬಿಟ್ಟು ಹೊರದೂಡಲು ಕುತ್ತಿಗೆಗೇ ಕೈ ಹಾಕಿದ್ದರು. ಹೀಗೆ ಗಾಂಧೀಜೀ ಕಡೆದ ದಿವ್ಯವಿಗ್ರಹ **ಬಾ**.

ದೇಶಸ್ವಾತಂತ್ರ್ಯ ಗಾಂಧೀಜೀ ಬಾಳಿನ ಗುರಿಯಾದಾಗಲೇ ಕಸ್ತೂರಬಾ ಕೂಡಾ ಆ ಕಂಕಣ ತೊಟ್ಟರು. ಎರಡು ಮೂರು ಬಾರಿ ಕಾರಾಗೃಹವಾಸದ ಬಹುಮಾನ ಕೂಡಾ ದೊರಕಿದೆ. ಕಾರಾಗೃಹವಾಸವನ್ನು ಗಾಂಧೀಜೀ ಎಷ್ಟು ಆನಂದದಿಂದ ಅಪ್ಪಿದರೋ **ಬಾ** ಕೂಡಾ ಅಷ್ಟೇ ಹರ್ಷದಿಂದ ಸ್ವಾಗತಿಸಿದ್ದಾರೆ. ಆದರ ಫಲವಾಗಿ ಬಂದ ದುಃಖ ನೋವುಗಳನ್ನು ನೋವಲ್ಲವೆಂಬ ಬುದ್ಧಿಯಿಂದ ಅನುಭವಿಸಿದಾರೆ. ಒಮ್ಮೆ ಬಾಪೂ ಸೆರೆಯಲ್ಲಿದ್ದಾಗ **ಬಾ** ಜ್ವರ ಬಂದು ಹಾಸಿಗೆ ಹಿಡಿದರು. ಹೆಚ್ಚಾಗಿಯೇ ಇತ್ತು. ಆದರೆ ಬಾಪೂಗೆ ಈ ಸುದ್ದಿ ತಿಳಿಸಲೇಕೂಡದೆಂದುಬಿಟ್ಟರು. ರಾಜಕೋಟೆ ಪ್ರಸಂಗದಲ್ಲಿ ಈ ಮುಪ್ಪಿನ

ಮುದುಕಿ 'ನಾನು ರಾಜಕೋಟೆಯ ಕನ್ಯೆ, ಅಲ್ಲಿನ ಸ್ಥಿತಿಗತಿ ಕೆಟ್ಟರೆ ಅದನ್ನು ನಾನು ಜೀವ ಕೊಟ್ಟಾದರೂ ಸರಿಪಡಿಸಬೇಕು.' ಎಂದು ಸತ್ಯಾಗ್ರಹದ ಸುಳಿಯಲ್ಲಿ ಧುಮುಕಿಬಿಟ್ಟರು. ಕಾರಾಗೃಹವಾಸ ಅನುಭವಿಸಿದರು.

ನಮ್ಮಲ್ಲಿ ಎಷ್ಟೋ ಜನಕ್ಕೆ ಸೆರೆಮನೆಗೆ ಹೋಗುವುದೇ ದೊಡ್ಡ ದೇಶ ಸೇವೆ ಮಾಡಿದ ಹಾಗೆ ಎಂಬ ಅಭಿಪ್ರಾಯವಿದೆ. ಎಲ್ಲಕ್ಕಿಂತ ಮೊದಲು ಸೆರೆ ಸೇರೋಣ ಎಂಬುದು ಹೇಡಿತನದ ಮನೋಭಾವ. ರಣರಂಗದಲ್ಲಿ ಜೀವದ ಪಣ ಕೊಟ್ಟು ಕಾದಬೇಕು....ಹೋಗಲೇಬೇಕಾಗಿ ಬಂದರೆ ಸೆರೆಗೆ ಹೋಗಬೇಕು. ೧೯೪೨ರ ಆಗಸ್ಟ್ ರಾತ್ರಿ ಗಾಂಧೀಜೀಯನ್ನು ದಸ್ತಗಿರಿ ಮಾಡಲು ಬಂದ ಪೋಲೀಸ್ ಸೂಪರಿಂಟೆಂಡೆಂಟ್ ಬಾಗೆ 'ನಿಮಗೇನೂ ವಾರಂಟು ಇಲ್ಲ, ಆದರೆ ಗಾಂಧೀಜೀಯ ಜೊತೆಗೆ ಇರಬಯಸುವುದಾದರೆ ನಿಮ್ಮನ್ನೂ ಕರೆದೊಯ್ಯಬಹುದೆಂದು ಅಪ್ಪಣೆ ಆಗಿದೆ' ಎಂದು ಹೇಳಿದರು. ಆದರೆ ಬಾ ಸ್ಪಷ್ಟವಾಗಿ ಹೇಳಿದರು. 'ನಾ ಮಾಡಬೇಕಾದ ಕೆಲಸವಿದೆ, ಮುಗಿಸಿ ಬರುತ್ತೇನೆ' ಎಂತ. ಮರುದಿನ ಬೋರೀ ಬಂದರಿನಲ್ಲಿ ಭಾಷಣ ಮಾಡುವಾಗ ದಸ್ತಗಿರಿಯಾಯಿತು. ನಗು ನಗುತ್ತಾ ಸೆರೆಗೆ ಹೋದರು.

ಈ ಕರ್ತವ್ಯ ಬುದ್ಧಿನಿಷ್ಠೆ ಸತ್ಯಾಗ್ರಹದಲ್ಲಷ್ಟೇ ಅಲ್ಲ. ಬಾಳಿನ ಎಲ್ಲ ವಿಷಯದಲ್ಲೂ ಬಾ ಯಾವಾಗಲೂ ಕರ್ತವ್ಯಕ್ಕೇ ಅಗ್ರಸ್ಥಾನ ಕೊಟ್ಟಿದ್ದಾರೆ; ಮೋಹ ಮಮತೆಯ ಮಾತು ಆಮೇಲೆ. ಚಂದ್ರಮತಿ ಮಗನನ್ನು ಮಾರಲು ಸಮ್ಮತಿಸಿದಳು. ಮಗನ ತಲೆಯನ್ನೇ ಕೊಡಲು ಮುಂದೆ ಬಂದ ತಾಯಂದಿರ ದೃಷ್ಟಾಂತ ತೀರಾ ಕಡಮ್ಮೆ. ಹಿಂದೆ ಕಾಣದ ಈ ಕರ್ತವ್ಯ ಬುದ್ಧಿಯ ಪವಾಡವನ್ನು ಕಸ್ತೂರಬಾ ಮೆರೆದು ತೋರಿದ್ದಾರೆ. ೧೯೩೨ರಲ್ಲಿ ಬೊಂಬಾಯಿಯಲ್ಲಿ ಹಿಂದೆಂದೂ ಆಗದಷ್ಟು ಅದ್ಭುತ ಪ್ರಮಾಣದ ಹಿಂದೂ ಮುಸ್ಲಿಂ ದೊಂಬಿಯಾಗಿ ಬೊಂಬಾಯಿನ ರಸ್ತೆಗಳು ನೆತ್ತರ ಕಲೆಗಟ್ಟಿ ಹೋದುವು. 'ತಲೆಗಳು ತರಗೆಲೆಗಳಂತೆ ಹಾರಿದವು. ಕುರುಡು ದ್ವೇಷದ ವಿಷಹೊಳೆಯಲ್ಲಿ ಮಮತೆ ಮಾನವತೆಗಳು ಕೊಚ್ಚಿಹೋದ ಕಾಲ. ಅಲ್ಲಿದ್ದವರೆಲ್ಲಾ ಜೀವದಾಸೆಯಿಂದ ಹೆದರಿ ಊರುಬಿಟ್ಟು ಬೇರೆ ಊರು ಸೇರುತ್ತಿದ್ದರು. ಮತದ ಹೆಸರಿನಲ್ಲಾಗುತ್ತಿದ್ದ ಈ ರಕ್ತಪಾತ ಜೀವನಷ್ಟ ಮೊದಲೇ ಅಹಿಂಸಾವಾದಿಯಾದ ಗಾಂಧೀಜಿಯ ಎದೆಯನ್ನು ತುಂಬಾ ಆಳ

ವಾಗಿ ಕಲಕಿದವು. ದೇವದಾಸ ಗಾಂಧಿಯನ್ನು ತಂತಿಕೊಟ್ಟು ಕರೆಸಿಕೊಂಡು 'ಹೋಗು, ಹಿಂದೂ ಮುಸ್ಲಿಮರು ಎಲ್ಲಿ ಹೊಡೆದಾಡುತ್ತಿದ್ದಾರೆ, ಅಲ್ಲಿ ಈ ದ್ವೇಷ ಬೇಡ ಎಂದು ಅವರನ್ನು ತಡೆ. ಅವರು ನಿನ್ನ ಮಾತು ಕೇಳಿ ಈ ದ್ವೇಷ ಬಿಟ್ಟರೂ ಸರಿಯೆ ಅಥವಾ ಅವರಲ್ಲಿ ನಿನ್ನನ್ನು ಯಾರು ಕೊಂದರೂ ಸರಿಯೆ. ಇದಕ್ಕಾಗಿ ನನ್ನ ಮಗನನ್ನು ಬಲಿ ಕೊಟ್ಟ ತೃಪ್ತಿ, ಸಂತೋಷ ನನಗಾಗುತ್ತದೆ' ಎಂದರು. ಅಭಿಮನ್ಯು ಚಕ್ರವ್ಯೂಹದೊಳಗೆ ನುಗ್ಗುತ್ತೇನೆ ಎಂದಾಗ ಧರ್ಮರಾಜನಂಥ ಸ್ಥಿತಪ್ರಜ್ಞ ಕೂಡಾ ಹಿಂದುಮುಂದು ಯೋಚಿಸಿದ. ಗಾಂಧೀಜೀ ಯೋಚಿಸುವುದಿರಲಿ, ತಾವೇ ಕರೆಸಿ ಮೃತ್ಯುವಿನ ತಾಂಡವರಂಗಕ್ಕೆ ಹೋಗು ಎಂದರು. ಈ ಸಂದರ್ಭದಲ್ಲಿ ಕಸ್ತೂರಬಾ ತೋರಿಸಿದ ಧೈರ್ಯ, ತ್ಯಾಗಾಸಕ್ತಿ ಸಾಟಿಯಿಲ್ಲದ್ದು. ಮಗನಿಗೆ ಬೊಂಬಾಯಿಯಲ್ಲಿ ನಿಶ್ಚಿತ ಸಾವು ಕಾದಿತ್ತು. ಆದರೇನು ಬಾ ಅಳುಕಿದರೆ ? 'ಹೋಗು ಕೀರ್ತಿಶಾಲಿಯಾಗು' ಎಂದು ಹರಸಿ ಕಳಿಸಿದರು. ಸುಧನ್ವನ ತಾಯಿ ಕೃಷ್ಣನ ಇದಿರು ಹೋಗಲ್ಕು ಹೊರಟ ಮಗನಿಗೆ 'ಶ್ರೀ ಕೃಷ್ಣನಿಗೆ ವಿರುದ್ಧವಾಗಿ ಸೆಣಸಿ ನಿಂತು ಬದುಕಿದವರಾರು ? ಹೋಗು ನಿನಗೆ ಸಾವು ಸಿದ್ಧ. ಆದರೆ ಕೃಷ್ಣನೂ ಮೆಚ್ಚುವ ಹಾಗೆ ಕದನವಾಡಿ ಸಾಯಿ' ಎಂದಳಂತೆ, ದೇವದಾಸನಿಗೆ ಆಶೀರ್ವಾದ ಮಾಡುವಾಗ ಬಾ ಎದೆಯೂ ಇದೇ ಹರಕೆಯನ್ನೇ ಪಲುಕುತ್ತಿದ್ದಿರಬೇಕು. ಈ ಧೈರ್ಯಕ್ಕೇ ದೇವರು ತೃಪ್ತನಾದನೇನೋ, ಗಾಂಧೀಜೀ ಪುತ್ರಬಲಿ ಕೊಡುತ್ತೇನೆಂದ ಕೂಡಲೇ ಪುಂಡರ ಗದ್ದಲ ಅಡಗಿ ಹಿಂದೂ ಮುಸ್ಲಿಂ ಪೋಂಬಿ ನಿಂತಿತು.

ಇದೆಲ್ಲದಕ್ಕಿಂತ ದೊಡ್ಡ ತ್ಯಾಗ ಕಸ್ತೂರಬಾ ಸಂಸಾರ ಸುಖವನ್ನೇ ಬಿಟ್ಟುಕೊಟ್ಟದ್ದು. ಧೀರ್ಘಕಾಲ ದಾಂಪತ್ಯಜೀವನವನ್ನು ನಡೆಸಿದ ಬಳಿಕ ಗಾಂಧೀಜೀ ಬ್ರಹ್ಮಚರ್ಯದ ವ್ರತ ಹಿಡಿದಾಗ ಕಸ್ತೂರಬಾ ಹಿಂದುಮುಂದು ನೋಡದೆ ತಾನೂ ಅದಕ್ಕೆ 'ಹೂ' ಎಂದು ಪೂರ್ಣ ಮನಸ್ಸಿನಿಂದ ಸಮ್ಮತಿಸಿದರು. ಈಗ ಅವರ ದಾಂಪತ್ಯದಲ್ಲಿ ಕಾಮದ ಕೆಸರು ಪೂರಾ ತೊಳೆದು ಹೋಗಿ ಪ್ರೇಮಮಯವಾಗಿ ಹೋಗಿದೆ; ಪತ್ನಿ ಭೋಗದ ದಾಸಿಯಾಗದೆ, ಪ್ರೇಮದ ಸಹಧರ್ಮಿಣಿಯಾಗಿದ್ದಾಳೆ; ಇದೊಂದು ಕ್ರಾಂತಿಕಾರಿಯಾದ ಪವಾಡ. ಕಸ್ತೂರಬಾನ ಸಹಕಾರ, ಸಹಾನುಭೂತಿ ಇಲ್ಲದೆ ಗಾಂಧೀಜೀ

ಇದನ್ನು ಮರೆಯಲು ಸಾಧ್ಯವಾಗುತ್ತಿರಲಿಲ್ಲ. ಎಂತಲೇ ಪ್ರಯೋಗದ ಪುಣ್ಯ ಬಾಪೂದಾದರೂ ಅದರ ಸಾರ್ಥಕತೆಯ ಕೀರ್ತಿ ಬಾನದು.

'ಭಾರತ ಸ್ವತಂತ್ರವಾಗದೆ, ನಾನಿನ್ನು ಈ ಆಶ್ರಮದಲ್ಲಿ ಕಾಲಿಡುವುದಿಲ್ಲ' ಎಂದು ಗಾಂಧೀಜೀ ಪ್ರತಿಜ್ಞೆಮಾಡಿ ಸಾಬರ್ಮತಿ ಆಶ್ರಮವನ್ನು ಬಿಟ್ಟು ಅನಿಕೇತನರಾಗಿ ಅಲೆಯುತ್ತಿದ್ದಾಗ, ಈ ಸನ್ಯಾಸಿಯನ್ನು ತನ್ನ ಪ್ರೇಮ, ಭಕ್ತಿಯಿಂದ ಸೇವಾಗ್ರಾಮದ ಆಶ್ರಮದಲ್ಲಿ ನಿಲ್ಲಿಸಿದವರು ದಿವಂಗತ ಜಮುನಾಲಾಲ ಬಜಾಜರು. ಆದರೆ ಅಲ್ಲಿ ಬಂದವರಿಗೆಲ್ಲಾ ಅಡಿಗೆಮಾಡಿ ಹಾಕಿ ಉಪಚಾರಮಾಡಿ ಆಶ್ರಮವನ್ನು ನಿಲ್ಲಿಸಿದವರು ಬಾ. ಗಾಂಧೀಜಿಯದು ನಿಷ್ಠೂರ ಸನ್ಯಾಸ, ತುಂಬಾ ನಿಯಮಬದ್ಧ ಜೀವನ. ಅದರಲ್ಲಿ ಎಳ್ಳುಕಾಳು ಮುಳ್ಳು ಮೊನೆಯಷ್ಟು ವ್ಯತ್ಯಾಸವಾಗಕೂಡದು. ಈ ದೃಷ್ಟಿಯಲ್ಲಿ ಯಂತ್ರವಿರೋಧಿ ಗಾಂಧೀಜೀ ತಮ್ಮ ಬಾಳನ್ನೇ ದೊಡ್ಡ ಯಂತ್ರವಾಗಿ ಮಾಡಿದಾರೆ. ಸ್ವಲ್ಪ ವ್ಯತ್ಯಾಸವಾದರೂ ಪ್ರಳಯವಾದ ಹಾಗಾಡಿಬಿಡುತ್ತಾರೆ. ಹೆಂಡತಿಯ ಬಯಕೆ ಸಲ್ಲಿಸಲು ಹರಿಜನರಿಗೆ ಪ್ರವೇಶವಿಲ್ಲದ ಗುಡಿಗೆ ಹೋದರೆಂದು ನ್ಯಾಯ ನೆರಳಾದ ಮಹದೇವ ದೇಸಾಯಿಯನ್ನು ಎಷ್ಟೋ ಖಂಡಿತವಾಗಿ ದಂಡಿಸಿದರು. ಆದರೆ ಈ ನಿಷ್ಠೂರ ವಾತಾವರಣದಲ್ಲಿ ಬಾ ಒಂದು ಅಮೃತ ಸ್ವರ. ಇದರಿಂದಾಗಿ ದುರಂತವಾಗಬೇಕಾದ ಎಷ್ಟೋ ಸನ್ನಿವೇಶಗಳು ತಪ್ಪಿವೆ.

* * * *

ಈಗ ಈ ಸೂತ್ರ ಕಾಲನ ಕತ್ತರಿಗೆ ಸಿಕ್ಕಿ ಕಿತ್ತುಹೋಗಿದೆ. ೬೧ ವರ್ಷಗಳಿಂದ ಪಳಗಿಸಿಕೊಂಡ ಜಿವದ ಜೊತೆಗಾತಿ ಗಾಂಧೀಜಿಗೆ ಇನ್ನಿಲ್ಲ. ಇದರ ಪರಿಣಾಮ ಅವರ ಹೃದಯದ ಮೇಲೆ ಹೇಗೋ ಏನೋ? ಒಂದೊಂದಾಗಿ ಸಂಸಾರ ಬಂಧನಗಳನ್ನು ಕಿತ್ತೊಗೆಯುತ್ತಿರುವ ವಿರಕ್ತ ಗಾಂಧೀಜೀ, ಬೆತ್ತಲೆಯ ಬೈರಾಗಿ ಇದೂ ಒಂದು, ಇದ್ದ ಒಂದೇ ಒಂದು ಬಂಧನವೂ ಹೋಯಿತೆಂದು ಹಿಗ್ಗಬಹುದು. ಇನ್ನು ಅವರು ಮತ್ತೆ ಆಶ್ರಮ ಕಟ್ಟುತ್ತಾರೋ ಇಲ್ಲವೇ ಊರೂರು ಅಲೆಯುತ್ತಾ ಅನಿಕೇತನರಾಗೇ ಇದ್ದಾರೋ?

ಬೈರಾಗಿ ಜೀವನದ ಶಿಲೆಯೊಳಗೆ ಅಡಗಿರುವ ಅಮೃತ ಚಿಲುಮೆಯಂಥ ರಸಹೃದಯವನ್ನುಳ್ಳ ಗಾಂಧೀಜೀ ಎಷ್ಟು ಪರಿತಪಿಸುತ್ತಿದಾರೋ!

ಮಗನ್‌ಲಾಲ್ ಗಾಂಧಿ ಸತ್ತಾಗ 'ವಿಧವೆಯಾದದ್ದು ಅವನ ಪತ್ನಿಯಲ್ಲ, ನಾನು' ಎಂದು ಕೊರಗುವಷ್ಟು ಕೋಮಲ ಹೃದಯ ಅವರದು. ಮಹದೇವ ಭಾಯಿ ಹೋದಾಗ ಸ್ಥಿತಪ್ರಜ್ಞರಾದರೂ ಮೈಮರೆತು 'ಮಹಾದೇವ್ ಮಹಾದೇವ್' ಎಂದು ಶವವನ್ನೇ ಕರೆದ ಮೃದು ಅಂತಃಕರಣ. ಆಗ ಪಕ್ಕದಲ್ಲಿದ್ದ **ಬಾ** 'ಭಾಯಿ, ಬಾಪೂ ಕರೆಯುತ್ತಿದಾರೆ. ಓ ಕೊಡು ಮಹಾದೇವ್' ಎಂದರಂತೆ. ಪತಿಯ ಕರೆಗೆ ಶವವೂ ಉತ್ತರ ಕೊಟ್ಟೀತು ಎಂಬಷ್ಟು ನಂಬಿಕೆಯೇನೋ **ಬಾ**ಗೆ! **ಬಾ** ಹೋದಾಗಲೂ ಬಾಪೂ ಹೀಗೇ ಕರೆದಿರಬಹುದು. ಆದರೆ **ಬಾ** ನಂತೆ ಅವರ ಹೃದಯಕ್ಕೆ ಸಮಾಧಾನದ ಸಂಜೀವನವನ್ನೆರೆಯಬಲ್ಲವರು ಯಾರಿದಾರೆ ಆಗಾಖಾನರ ಸೆರೆಮನೆಯಲ್ಲಿನ್ನು ?

ಇತ್ತೀಚೆಗಂತೂ ಬಾಪೂ ಬಾಳಿನಲ್ಲಿ ಮರಣದ ಮೆರವಣಿಗೆಯೇ ನಡೆಯುತ್ತಿದೆ. 'ನಾ ನಿಮ್ಮ ಮಗ' ಎಂದು ಗಾಂಧೀಜೀಯನ್ನು ತಂದೆಯಾಗಿ ದತ್ತು ತೆಗೆದುಕೊಂಡ ಮಗ ಜಮುನಾಲಾಲರು ೧೯೪೨ರಲ್ಲಿ ತೀರಿಕೊಂಡರು. ಅದೇ ಗಾಂಧೀಜಿಯ ಪಾಲಿನ ಸಹಿಸಲಾಗದ ಸಿಡಿಲಾಯಿತು. ಇದಾದ ನಾಲ್ಕಾರು ತಿಂಗಳಲ್ಲೇ ಬಾಪುವಿನ ಬಲಗೈಯಾದ, ಅಲ್ಲ ಆಜೀವದ ದೇಹವಾದ ಮಹದೇವ ಭಾಯಿ ಸೆರೆಗೆ ಬಂದ ಎಂಟು ದಿನದಲ್ಲೇ ಹೃದ್ರೋಗದ ಮಾರಿಗೆ ಬಲಿಯಾದರು. ಇದಾದ ವರ್ಷ–ಎರಡು ವರ್ಷದಲ್ಲೇ **ಬಾ** ಕೂಡಾ ಕೈ ಬಿಟ್ಟು ಹೋದರು. ಇದರ ಜೊತೆಗೆ ರಣಜಿತ್ ಪಂಡಿತರು ಹೋದರು. ಪ್ರೀತಿಯ ಮೌಲಾನಾ ಪತ್ನಿಯನ್ನು ಕಳೆದುಕೊಂಡರು. ಕಿಶೋರಲಾಲರಿಗೆ ಉಗ್ರರೋಗ. ವಜ್ರದೇಹಿ ಸರದಾರ್ ವಲ್ಲಭಭಾಯಿ ಹಾಸಿಗೆ ಹಿಡಿದಿದಾರೆ—ಇಂಥ ಸುದ್ದಿ ಸಾವಿರ ಹೋಗುತ್ತಿವೆ ಗಾಂಧೀಜಿಗೆ. ಈಗವರನ್ನು ನೋಡಿಕೊಳ್ಳುವವರಾರು ?

ಸರಕಾರ ಹೃದ್ರೋಗದಿಂದ ಹಾಸಿಗೆ ಹಿಡಿದ **ಬಾ**ಗೆ ಎಂಥ ವೈದ್ಯೋಪಚಾರ ನೀಡಿತೋ ಏನೋ. ಅಂತೂ ಸಾಯುವ ಗಳಿಗೆಯಲ್ಲಿ ಕಲಕತ್ತೆಯಿಂದ ವಿಮಾನದಲ್ಲಿ ಔಷಧ ತರಿಸುವ ನಾಟಕ ಆಡಿದರು. ಆದರೆ ರೋಗ ವಿಷಮವಾದಾಗ ಬಿಡಿ ಎಂದು ದೇಶಕ್ಕೆ ದೇಶವೇ ಬೇಡಿದಾಗ 'ಪತಿ ಸಾನ್ನಿಧ್ಯವನ್ನು ತಪ್ಪಿಸುವ ಇಷ್ಟ ನಮಗಿಲ್ಲ, ಅದು ಯೋಗ್ಯವಲ್ಲ' ಎಂದು

ನಮ್ಮ ದಾಸ್ಯವನ್ನು ಅಣಕಿಸಿ, ಅಪಮಾನಿಸಿ ಮಾತಾಡಿ, ಸರಿಯಾದ ಔಷಧ ತರಿಸಲು ಕೊನೆಯವರೆಗೂ ತಡಮಾಡಿ ಬಾಪೂನ ಕರುಳಿಗೆ ಕೊಳ್ಳಿಕೊಟ್ಟ ಸರಕಾರ ಎಷ್ಟುಮಟ್ಟಿಗೆ ಆಕೆಗೆ ಉಪಚಾರ ಮಾಡಿತೋ ? ಇದಕ್ಕೆ ಯಾರೂ ಉತ್ತರ ಹೇಳಲಾಗದ ಪ್ರಶ್ನೆ. ಅಂತೂ ನಮ್ಮ ಪುಣ್ಯ ಸವೆದು ಬಾ ಸ್ವರ್ಗಾರೋಹಣ ಮಾಡಿದರು.

ಅವರ ಮರಣದಿಂದ ದೇಶಕ್ಕೆ ತುಂಬಾ ದೊಡ್ಡ ನಷ್ಟ. ಗಾಂಧೀಜೀ ಪಳಗಿಸಿದ ನಿಪುಣ ಸೈನಿಕರಲ್ಲಿ ಒಬ್ಬೊಬ್ಬರಾಗಿ ಕೈಬಿಟ್ಟು ಹೋಗುತ್ತಿದಾರೆ. ಅವರಲ್ಲಿ ಬಾ ಕೂಡಾ ಒಬ್ಬರು. ಅಂಥ ಆದರ್ಶ ಮಾತೆ, ಸತಿ, ಗೃಹಿಣಿ, ದೇಶಸೇವಿಕೆ, ಹೆಣ್ಣು—ಇನ್ನೆಲ್ಲಿ ? ಅವರು ಬಿಟ್ಟುಹೋದ ಸ್ಥಾನ ಚಿರಶೂನ್ಯ ಸಿಂಹಾಸನ.

ನಿರಕ್ಷರಕುಕ್ಷಿಯಾದರೂ, ಆತ್ಮಸಂಸ್ಕಾರ ಬಲದಿಂದ ದಿವ್ಯ ಆದರ್ಶವೊಂದನ್ನು ಮೆರೆದ ಬಾ, ಪಾರ್ಥಿವದೇಹ ಹೋದರೂ ಚಿರಂಜೀವಿ. ಅಂಥ ಆತ್ಮಕ್ಕೆ ಮರಣ ಉಂಟೆ ? ಅವರ ಆತ್ಮ ಸ್ಫೂರ್ತಿಯು ಮಿಂಚಾಗಿ ನಮ್ಮೆಲ್ಲರಲ್ಲೂ ಸಂಚರಿಸಿ, ತಾನು ಬಯಸಿದ ಕಾರ್ಯವನ್ನು, ಭಾರತ ಸ್ವಾತಂತ್ರ್ಯವನ್ನು ನಮ್ಮ ಮೂಲಕ ಸಾಧಿಸಿಕೊಳ್ಳುತ್ತದೆ. ಇದು ತ್ರಿಕಾಲಾಬಾಧಿತ ಸತ್ಯ.



# ಪಟ್ಟ ಶಿಷ್ಯ

ಮಹಾದೇವ ದೇಸಾಯರ ಪರಿಚಯವಿಲ್ಲದ ಪರ್ಥಾಯಾತ್ರೆ ಕಪ್ಪುರವಿಲ್ಲದ ಆರತಿಯಂತೆ. ಅವರ ಜೀವನ ಗಾಂಧೀಜಿಯೊಂದಿಗೆ ಅಷ್ಟು ಬೆರತುಹೋಗಿದೆ. ಗಾಂಧೀಜೀ ರಾಮನಾದರೆ ಮಹಾದೇವ ದೇಸಾಯಿ ಲಕ್ಷ್ಮಣ. ಭಾವ–ರೂಪಗಳಿದ್ದಂತೆ, ವಸ್ತು–ಛಾಯೆಗಳಿದ್ದಂತೆ ಅವರ ಸಂಬಂಧ.

ಗಾಂಧೀಜೀ ಇದ್ದಲ್ಲಿ ಮಹಾದೇವ ದೇಸಾಯಿ ಇದಾರೆಯೇ ಎಂದು ಹುಡುಕುವ ಅಗತ್ಯವಿಲ್ಲ. ಸದಾ ಅವರ ಹಿನ್ನೆಲೆಯಲ್ಲಿ ಅವರ ಪ್ರೈಯಂತೆ ಇವರು ಚಲಿಸುತ್ತಾರೆ. ಪರ್ಣಕುಟಿಯಲ್ಲಾಗಲಿ ಪ್ರವಾಸದಲ್ಲಾಗಲಿ ಸಂಭಾಷಣೆಗಳಲ್ಲಾಗಲಿ ಸಭಾಮಧ್ಯದಲ್ಲಾಗಲಿ, ಗಾಂಧೀಜಿಯ ಮೇಲೆ ನೆಟ್ಟಕಣ್ಣು, ಕೈಯಲ್ಲಿ ಲೇಖನಿ ಕಾಗದ–ಹೀಗೊಂದು ಮೂರ್ತಿ ಕಾಣಬರುತ್ತದೆ. ಅದೇ ಮಹಾದೇವ ದೇಸಾಯಿ, ಗಾಂಧೀಜಿಯ ಪಟ್ಟಶಿಷ್ಯ.

ಮಹಾದೇವಭಾಯಿ ಗಾಂಧೀಜಿಯ ಕಾರ್ಯದರ್ಶಿಗಳೆಂದು ಹೆಸರಾಗಿದಾರೆ. ಆದರೆ ಎಲ್ಲ ಕಾರ್ಯದರ್ಶಿಗಳಂತಲ್ಲ ಇವರು. ಯಜಮಾನರ ಪತ್ರವ್ಯವಹಾರ, ಬಂದು ಹೋಗುವವರು, ಲೆಕ್ಕಾಚಾರ–ಇಷ್ಟೇ ಉಳಿದವರ ಲೋಕ. ಮಹಾದೇವಭಾಯಿ ಹಾಗಲ್ಲ. ಗಾಂಧೀಜೀ ಹಾಗೆ ತಿಳಿದೂ ಇಲ್ಲ. ರಾಜಕಾರಣವೇನು, ಅಧ್ಯಾತ್ಮವೇನು, ಲೋಕಾಂತರವೇನು. ಏಕಾಂತವೇನು, ಎಲ್ಲದರಲ್ಲೂ ಎಡಬಿಡದೆ ಇವರು ಅವರ ಜೀವದ ಗೆಳೆಯನಂತೆ ನಡೆಯುತ್ತಾರೆ. ಇವರಿಲ್ಲದೆ ಗಾಂಧೀಜಿಗೆ ಒಂದು ದಿನವೂ ನಡೆಯದು, ಯಾವ ಕೆಲಸದಲ್ಲೂ ಮಹಾದೇವಭಾಯಿ ಬೇಕು ಅವರಿಗೆ. ಸಂಗಡಿಗರೊಡನೆ ಸಂಭಾಷಣೆ, ಇದಿರಾಳಿಗಳೊಡನೆ ಸಂಧಾನ, ನಾಯಕರೊಡನೆ ಚರ್ಚೆ–ಎಲ್ಲಕ್ಕೂ ಅವರ ಪಾಲಿಗೆ ಇವರು ಸಾಕ್ಷಿಯಾಗಿರಬೇಕು. ಗಾಂಧೀಜಿಯ ಎಲ್ಲ ಕೆಲಸಗಳಲ್ಲೂ, ಎಲ್ಲ ವಿಚಾರಗಳಲ್ಲೂ ಇವರು ಒಂದು ಬಗೆಯ ಆತ್ಮಸಾಕ್ಷಿ. ಸಾಧಾರಣವಾಗಿ ಮಹಾದೇವಭಾಯಿ ಇರುವುದು




ಮಹಾದೇವ ದೇಶಾಯಿ

ವರ್ಧಾದಲ್ಲಿ, ಮಗನ್‌ವಾಡಿಯಲ್ಲಿ. ಇವರು, ಇವರ ಹೆಂಡತಿ ದುರ್ಗಾಬೇನ್, ಮಗ ನಾರಾಯಣದೇಸಾಯಿ ಇಷ್ಟು ಇವರ ಅರ್ಧ ಸಂಸಾರ. ಇವರೆಲ್ಲರಿಗೂ ಒಂದು ಕೋಣೆಯಲ್ಲಿ ಅರ್ಧವಾದರೆ ಇವರ ಉಳಿದರ್ಧ ಸಂಸಾರವಾದ ಪುಸ್ತಕಗಳಿಗೆ ಉಳಿದ ಮನೆಯೆಲ್ಲವೂ ಆಗಬೇಕು. ಮನೆಯ ತುಂಬಾ ಎಲ್ಲಿ ನೋಡಿದರೂ ಪುಸ್ತಕವೇ ಪುಸ್ತಕ. ಮಹಾದೇವಭಾಯಿಗೆ ಓದುವ ಹುಚ್ಚು ಬಹಳ. ಸದಾ ಓದುತ್ತಲೇ ಇರುತ್ತಾರೆ. ಎಲ್ಲವನ್ನೂ ಓದುತ್ತಲೇ ಇರುತ್ತಾರೆ. ಯಾವುದನ್ನೂ ಬಿಡರು, ಅವರ ಪುಸ್ತಕಭಾಂಡಾರ ಬಹಳ ಅಮೂಲ್ಯವಾದುದು. ಜಗತ್ತಿನಲ್ಲಿ ಇಂಗ್ಲೀಷು ಭಾಷೆಯ ಎಲ್ಲ ಮುಖ್ಯ ಗ್ರಂಥಕರ್ತರಿಗೂ ತಮ್ಮ ಪುಸ್ತಕವನ್ನು ಮಹಾದೇವ ದೇಸಾಯಿಯ ಸಂಗ್ರಹಕ್ಕೆ ಕಳಿಸುವುದೆಂದರೆ ತುಂಬಾ ಸಂತೋಷ. ಇತರ ಭಾಷೆಗಳವೂ ಬರುತ್ತವೆ. ಯಾವುದನ್ನೂ ಬಿಡದೆ ಓದಲು ಹೋಗುತ್ತಾರೆ ಇವರು. ನಡುರಾತ್ರಿಯವರೆಗೆ ದೀಪ ಉರಿಸುವುದು ಇವರಿಗೆ ರೂಢಿಯೇ ಆಗಿ ಹೋಗಿದೆ.

ಓದಿದುದನ್ನೆಲ್ಲ ಅರಿಗಿಸಿಕೊಂಡು ಬರಹಗಳಲ್ಲಿ ಉಪಯೋಗ ಮಾಡುವ ಚಾತುರ್ಯ ಇವರಿಗಿದೆ. 'ಹರಿಜನ'ದಲ್ಲಿ (M. D.) ಎಂ. ಡಿ. ಎಂಬ ಅಕ್ಷರಗಳಿಂದ ಬರುವ ಹೃದ್ಯವಾದ ಗದ್ಯ ಇವರದು. ಇಂಗ್ಲೀಷು ಶೈಲಿಯಲ್ಲಿ M. D. ಯದು ಒಂದು ವಿಶಿಷ್ಟಸ್ಥಾನ. 'ನಿರಾಭರಣ ಸುಂದರಿ'ಯಂತೆ ಆ ಶೈಲಿ ಸರಲಮಧುರವಾಗಿದೆ. ಆ ಲೇಖನಗಳಲ್ಲಿ ಆಗಾಗ ಬರುವ ದೃಷ್ಟಾಂತ, ಪ್ರಮಾಣಗಳನ್ನು ನೋಡಿದರೆ ಇವರ ಈ ಅಗಾಧ ಪಾಂಡಿತ್ಯದ ಗುರುತಾಗುತ್ತದೆ. ಹಿಂದೀ, ಗುಜರಾತಿಗಳಲ್ಲೂ ಇವರದು ಅದೇ ಬಗೆಯ ಸರಲ ಸುಂದರ ಶೈಲಿ. ಸುಲಿದ ಬಾಳೆಯ ಹಣ್ಣು. ದ್ರಾಕ್ಷಾಪಾಕ.

ಗಾಂಧೀಜಿಗೂ ಇವರಿಗೂ ಈ ವಿಷಯದಲ್ಲಿ ಕಾಂಚನಗಂಗೆ, ಕನ್ಯಾಕುಮಾರಿಗಳಿಗಿದ್ದಷ್ಟು ಅಂತರ. ಗಾಂಧೀಜಿಗೆ ಅತಿಯಾಗಿ ಓದುವುದು ಸೇರುವುದಿಲ್ಲ. ಮುಖ್ಯವಾದುದನ್ನು, ಅಗತ್ಯವಾದುದನ್ನು ಮಾತ್ರ ಓದಿದರೆ ಸರಿ, ಉಳಿದುದೆಲ್ಲ "ಕಬ್ಬಿನ ಸಿಪ್ಪೆ" ಯೆಂದು ಅವರ ಅಭಿಪ್ರಾಯ.

ಇಂಗ್ಲೆಂಡಿನಲ್ಲಿ ಜಾನ್‌ಸನ್ ಎಂಬ ಸಾಹಿತಿಗೆ ಬಾಸ್‌ವೆಲ್ ಎಂಬ ಗೆಳೆಯನಿದ್ದ. ಜಾನ್‌ಸನ್ನನ ಜೀವನದ ಪ್ರಸಂಗಗಳನ್ನು ಆಯಾ ದಿನವೇ

ಬರೆದಿಡುತ್ತ, ಮುಂದೆ ತನ್ನ ಗೆಳೆಯನ ಜೀವನ ಚರಿತೆಯನ್ನು ವಿಸ್ತಾರವಾಗಿ ಬರೆಸು, ನಡೆದುದನ್ನು ನಡೆದಂತೆ ವರ್ಣಿಸಿದ. ಹಾಗೆ ಯಾರ ಜೀವನ ವನ್ನೂ ಚಿತ್ರಗುಪ್ತನಂತೆ ಚಿತ್ರಿಸುವ ಕೆಲಸ ಇನ್ನೆಲ್ಲೂ ನಡೆದಿಲ್ಲ. ಮಹಾದೇವ ದೇಸಾಯಿ ಬಾಸ್‌ವೆಲ್ಲನ ಹಾದಿ ಹಿಡಿದಿದಾರೆ. ದಿನದಿನವೂ ಗಾಂಧೀಜಿಯ ಜೀವನವನ್ನು ಚಿತ್ರಿಸುತ್ತಿದಾರೆ. "ಬಾಸ್‌ವೆಲ್ಲನನ್ನು ಮೀರಿ ಸುತ್ತಿದಾನೆ ಮಹಾದೇವ" (He is out–Boswelling Boswell himself) ಎಂದು ಗಾಂಧೀಜಿಯೇ ಹೇಳಿದರು.

ದಿನವೂ ಅಂಚೆ-ಬಂದ ಮೇಲೆ ಮಗನ್‌ವಾಡಿಯಿಂದ ಅವನ್ನು ತೆಗೆದು ಕೊಂಡು ಸೇವಾಗ್ರಾಮಕ್ಕೆ ದೇಸಾಯರ ಪಯಣ; ಮಳೆಬರಲಿ, ಚಳಿಯಿರಲಿ, ಬಿಸಿಲು ಉರಿಯಲಿ, ಕೆಸರು ತುಂಬಿರಲಿ, ಈ ನಾಲ್ಕಾರು ವರ್ಷ ಹೀಗೇ ಕಳೆದಿದಾರೆ. ಇಂಥ ಉಗ್ರ ತಪಸ್ಸು ಜಗತ್ತಿನಲ್ಲಿ ಯಾವ ನಾಯಕನ ಯಾವ ಕಾರ್ಯದರ್ಶಿಗೂ ಸಾಧ್ಯವಲ್ಲ. ಮಹಾದೇವ ದೇಸಾಯರ ಅನನ್ಯ ಶ್ರದ್ಧೆ, ಗಾಂಧೀಜಿಯಲ್ಲಿ ಇವರಿಗಿರುವ ಅಚಲ ನಿಷ್ಠೆ, ಅವರ ಸೇವೆಯಲ್ಲಿ ಇವರು ಪಡೆಯುವ ಆನಂದ "ನಭೂತೋ ನಭವಿಷ್ಯತಿ". ಗುರುವಿಗಾಗಿ, ಹಿರಿಯನಿಗಾಗಿ, ತಮ್ಮ ಇಡೀ ಜೀವನವನ್ನೇ ಹೀಗೆ ಧಾರೆಯೆರೆದ ಪುಣ್ಯ ಶ್ಲೋಕರು ಮಾನವಜಾತಿಯ ಇತಿಹಾಸದಲ್ಲೇ ಕಡಿಮೆ. ಈ ಕಾಲದಲ್ಲಂತೂ ಆ ಕೀರ್ತಿ, ಆ ಧೈರ್ಯ ಇವರದೊಬ್ಬರದೇ ಸರಿ.

ಮಹಾದೇವ ದೇಸಾಯಿ ಗುಜರಾತೀ ಜನ. ಕಾಲೇಜಿನಲ್ಲಿ ಸಿಡಿಲು ಮರಿಯೆಂದು ಹೆಸರಾದ ವಿದ್ಯಾರ್ಥಿ. ಗಾಂಧೀಜೀ ದಕ್ಷಿಣ ಅಫ್ರಿಕದಿಂದ ಆ ಹೊತ್ತಿಗೆ ಬಾರದೆ ಇದ್ದರೆ ವಕೀಲಿಯಲ್ಲಿ ಮುಂದುವರಿದು ಶ್ರೀಮಂತರಾಗ ಬಹುದಾಗಿತ್ತು. ದೇವರು ಇವರಿಗೆ ಆ ಅನುಕೂಲಗಳನ್ನು ಕೊಟ್ಟೇ ಇದ್ದ. ಆದರೆ ಆ ಬಂಧನ, ಸಾರರಹಿತ ಸಾರ್ಥಜೀವನ, ಇವರಿಗೆ ಹೇಗೆ ರುಚಿಸ ಬೇಕು? ಗಾಂಧೀಜೀ ಗುಜರಾತಿಗೆ ಬಂದೊಡನೆ ಆ ಗುಂಪಿಗೆ ಸೇರಿ ಬಿಟ್ಟರು.

ಗಾಂಧೀಜಿಯ ಸಹವಾಸ ಸುಖವಾದುದಲ್ಲ. ಅವರ ಕಠೋರ ನಿಯಮಗಳೂ, ಉಗ್ರ ಸರಳತೆಯೂ ಜೀವನವನ್ನು ಸುಖವಿಲಾಸಗಳ ಕಡೆ ಒಯ್ಯುವುದಿಲ್ಲ. ಕರ್ತವ್ಯವೇ ಸೌಂದರ್ಯ, ಆನಂದವೆನ್ನುವ ದೃಷ್ಟಿ

ಅಪರದು. ಅವರೊಡನೆ ಇರುವುದೆಂದರೆ ಮುಳ್ಳಿನ ಹಾಸಿಗೆಯ ಮೇಲೆ ಮಲಗಿದಂತೆಯೆ. 'ನನ್ನ ಸಹವಾಸ ಎಂದರೆ ನಿನಗೆ ಗೊತ್ತಿದೆ ತಾನೆ. ಗಲ್ಲಿಗೇರುವ ಸಂದರ್ಭ ಎಂದಿಗೂ ಬಾರದೆ ಹೋಗಬಹುದು. ಆದರೂ ಸಿಂಹಾಸನವನ್ನು ಹತ್ತುವಂತೆ, ನಿನ್ನ ಕಚೇರಿ ಕುರ್ಚಿಯ ಮೇಲೆ ಕೂಡುವಂತೆ, ಗಳಿಗೆಗಳಿಗೆಗೂ ಗಲ್ಲನ್ನು ಏರಲು ಸಿದ್ಧನಿರಬೇಕು' ಎಂದು ಗಾಂಧೀಜೀ ತಮ್ಮ ಶಿಷ್ಯರೊಬ್ಬರಿಗೆ ಬರೆದಿದ್ದರು. ಎಷ್ಟೋ ಜನ ಈ ಕಂಟಕ ಕಿರೀಟ ಧಾರಣೆಗೆ ಹಿಂದೆಗೆದಿದಾರೆ. ಮಹಾದೇವಭಾಯಿಗಂತೂ ಈ ಅಗ್ನಿ ನಾರಾಯಣನ ಅಂಚಿಗೇ ಇದ್ದು ಬಾಳಬೇಕಾಗಿದೆ. ಇವರು ಈ ಅಗ್ನಿ ಪರೀಕ್ಷೆಯಲ್ಲಿ ಮುಕ್ತಿಯನ್ನು ಸಾಧಿಸಿಕೊಂಡಿದಾರೆ. ತಮ್ಮ ರೆಕ್ಕೆ ಸುಟ್ಟುಕೊಳ್ಳಲಿಲ್ಲ.

ಇಪ್ಪತ್ತು ವರ್ಷಗಳಿಂದ ಗಾಂಧೀಜಿಯ ಸೇವೆಯನ್ನು ದೇಸಾಯಿ ಅವಿಶ್ರಾಂತವಾಗಿ ನಡೆಸಿದಾರೆ. ಮೊದಲು "ಯಂಗ್ ಇಂಡಿಯಾ", ಈಚೆಗೆ "ಹರಿಜನ" ಇವೆರಡೂ ಪತ್ರಿಕೆಗಳನ್ನು ಗಾಂಧೀಜೀ ನಡೆಸಿದುದು ಇವರ ಬಲದಿಂದ. ಆ ಪತ್ರಿಕೆಗಳು ಎಲ್ಲ ಪತ್ರಗಳಂತೆ ಸುದ್ದಿಯ ಪತ್ರಗಳಲ್ಲ. ಅದೊಂದು ಸಾಪ್ತಾಹಿಕ ಸಂದೇಶ. ಹತ್ತೂ ಜನರ ಅಭಿಪ್ರಾಯಗಳ ಸಂಗ್ರಹ ಅಲ್ಲ. ಗಾಂಧೀಜೀ ರಾಷ್ಟ್ರನಿರ್ಮಾಣ ಕಾರ್ಯದಲ್ಲಿ ಈ ಇಪ್ಪತ್ತು ವರ್ಷ ದೇಶಕ್ಕೆ, ಕೆಲಸಗಾರರಿಗೆ ವಾರವಾರವೂ ಕೊಡುತ್ತಿದ್ದ ಪಾಠ. ತಮ್ಮ ಸಿದ್ಧಾಂತಗಳನ್ನು ಗಾಂಧೀಜೀ ಜನರಿಗೆ ತಿಳಿಸುವ ಸಾಧನ ಇವು. ಈ ಕೆಲಸದಲ್ಲಿ ಮಹದೇವ ದೇಸಾಯಿ, ಪ್ಯಾರೆ ಲಾಲಜೀ ಇಬ್ಬರೂ ಗಾಂಧೀಜಿಗೆ ನೆರವಾಗುತ್ತಿದಾರೆ. ಮಹಾದೇವ ದೇಸಾಯಿ ವಾರವಾರವೂ ಗಾಂಧೀಜಿಯ ಜೀವನವನ್ನು ಮುದ್ದಾಗಿ ಚಿತ್ರಿಸುತ್ತ ದೇಶದಲ್ಲಿ ಅವರ ಬಗ್ಗೆ ಅಪಾರ ಭಕ್ತಿಯನ್ನುಂಟುಮಾಡಿದರು. ತಮ್ಮ ಮೋಹಕವಾದ ಶೈಲಿಯಲ್ಲಿ ಗಾಂಧೀಜಿಯ ಸಿದ್ಧಾಂತಗಳನ್ನು ವಿವರಿಸಿ ಜನರಿಗೆ ರುಚಿಸುವಂತೆ ಮಾಡಿದಾರೆ. ನಿಜವಾಗಿ ದೇಸಾಯರ ಕೈವಾಡವಿಲ್ಲದ "ಹರಿಜನ" ಸ್ವಲ್ಪ ಸಪ್ಪೆಯೇನೋ ಎನಿಸುತ್ತದೆ. ಕಳೆದ ವರ್ಷ ಇವರು ಬೇನೆ ಬಿದ್ದು ವರ್ಧಾದಿಂದ ಸಿಮ್ಲಾಕ್ಕೆ ಆರೋಗ್ಯಕ್ಕಾಗಿ ಹೋದಾಗ ಗಾಂಧೀಜಿಗೆ ಬಹಳ ನೋವಾಯಿತು. ಹರಿಜನದ ಸಂಪಾದನ ಕಾರ್ಯದಲ್ಲಿ ಇದರಿಂದ ಆಗುವ ಲೋಪ

ಗಳನ್ನು ಮನ್ನಿಸಬೇಕೆಂದು ಕೇಳಿದರು. "ಹರಿಜನ" ನಿಂತರೂ ನಿಲ್ಲ ಬಹುದು ಎಂದರು.

ಪತ್ರಿಕಾ ವ್ಯವಸಾಯದಲ್ಲಿ ಈ ಗುರು ಶಿಷ್ಯರಿಬ್ಬರೂ ಸೇರಿ ಮಾಡಿದ ಕ್ರಾಂತಿ ಅನುಪಮವಾದದು. ಇತಿಹಾಸದಲ್ಲೇ ಇಂಥದಾಗಿಲ್ಲ. ಸಂಪಾದ ಕೀಯುವನ್ನು 'ನಾನು' ಎಂದು ಉತ್ತಮ ಪುರುಷ ಏಕವಚನದಲ್ಲಿ ಮೊದಲು ಬರೆದದ್ದು ಗಾಂಧೀಜೀ. ಇನ್ನು ಯಾರಿಗೂ ಅದನ್ನು ಅನುಕರಿಸುವ ಧೈರ್ಯ ವಾಗಿಲ್ಲ. ಒಂದೇ ಒಂದು ವ್ಯಕ್ತಿಯ ಅಭಿಪ್ರಾಯಗಳ ಸಲುವಾಗಿ ಎಲ್ಲೂ ಪತ್ರಿಕೆ ಹೊರಟಿಲ್ಲ, ಹೊರಡುವ ಸಂಭವವೂ ಕಾಣುವುದಿಲ್ಲ. ಮಹಾದೇವ ಭಾಯಿಯ ಹಾಗೆ ತನ್ನ ಗುರು—ನಾಯಕನ ಜೀವನವನ್ನು ದಿನದಿನವೂ ಚಿತ್ರಿ ಸುತ್ತ ಬಂದವರಿಲ್ಲ. ಪತ್ರಿಕಾ ವ್ಯವಸಾಯದಲ್ಲಿ ಸತ್ಯ ಸಂಯಮಗ ಳನ್ನು ತಂದು ದೇಸಾಯಿ ಒಂದು ಮಾದರಿಯಾಗಿದ್ದಾರೆ; ತರುಣರಿಗೆ ಒಂದು ಸ್ಫೂರ್ತಿಯಾಗಿದ್ದಾರೆ. ಗಾಂಧೀಜೀ ಒಮ್ಮೆ ಬರೆದರು, 'ಕೈಯಲ್ಲಿ ಲೇಖನಿ ಹಿಡಿದೇ ತನ್ನ ಕೊನೆಯ ಗಳಿಗೆ ಕಳೆಯಲು ಮಹಾದೇವ ಸಿದ್ಧ.' ಇದಕ್ಕಿಂತ ಚೆನ್ನಾದ ವ್ಯಂಗ್ಯಚಿತ್ರ – ದೇಸಾಯರದು – ಯಾರೂ ಬರೆಯ ಲಾರರು.

ಮಹಾದೇವಭಾಯಿ ಬರೀ ಗೊಡ್ಡು ಪಂಡಿತರಲ್ಲ, ಒಣ ಬರೆಹಗಾರರೂ ಅಲ್ಲ. ತುಂಬಾ ರಸಿಕರು. ಇವರದು ಕಲೆಯ ಕೈ. ಸಾಹಿತ್ಯದಲ್ಲಿ ಇವರಿಗೆ ಪೂರಾ ಒಲವು. ಇಂಗ್ಲೀಷು ಸಂಸ್ಕೃತ ಹಿಂದೀ ಸಾಹಿತ್ಯಗಳಿಂದ ಆಗಾಗ ಚೆಲುವಿನ ನುಡಿಗಳನ್ನು ಉದಹರಿಸುತ್ತಾರೆ. ಪ್ರಾರ್ಥನೆಗೆ ಕೂತರೆ ಪದಗಳನ್ನು ಶ್ರಾವ್ಯವಾಗಿ ಅನ್ನುವಷ್ಟು ಶಾರೀರವಿದೆ ಇವರಿಗೆ. ಇವರ ಕಲೆ ಯನ್ನು ನೋಡಬೇಕಾದುದು ಅರ್ಥ ಶಾಸ್ತ್ರ, ವೇದಾಂತ ಮುಂತಾದ ವಿಷಯಗಳನ್ನು ಇವರು ಸುಲಿದ ಬಾಳೆಯ ಹಣ್ಣಿನಂತೆ ವಿವರಿಸುವುದರಲ್ಲಿ. ಇವರ ಲೇಖನಿಯೊಂದು ಯಕ್ಷದಂಡ. ಅದರಲ್ಲೊಂದು ಬಗೆಯ ಇಂದ್ರ ಜಾಲವಿದೆಯೆಂದರೆ ಏನೂ ಹೆಚ್ಚು ಹೇಳಿದಂತಾಗಲಿಲ್ಲ.

ಮಹಾದೇವಭಾಯಿಯ ಜೀವನದಲ್ಲೂ ಕಲಾವಂತಿಕೆಯಿದೆ; ಕೇವಲ ಸಾಹಿತ್ಯದಲ್ಲೇ ಅಲ್ಲ. ಇವರು ಗಾಂಧೀ ಜನ. ಜೀವನದಲ್ಲಿ ಬೆರತು ಬರ ಲಾರದ ಕಲೆ ಇವರಿಗೆ ಕಲೆಯಲ್ಲ. ಇವರ ಸಜ್ಜಾದ ಕೋಣೆಯನ್ನು

ನೋಡಿದರೆ ಇದು ತಿಳಿಯುತ್ತದೆ. ಎಲ್ಲಾ ಚೊಕ್ಕಟ, ಜಳ ಜಳ. ಎಲ್ಲ ಪದಾರ್ಥಗಳೂ ತಮ್ಮ ತಮ್ಮ ಸ್ಥಾನದಲ್ಲಿ ಇರುತ್ತವೆ. ಇವರು ಓದಿ ಮುಗಿಸಿಟ್ಟ ಪುಸ್ತಕ ಯಾರೂ ಮುಟ್ಟಿಲ್ಲವೇನೋ ಎನ್ನುವ ಹಾಗೆ ಇರುತ್ತದೆ. ವೇಷದಲ್ಲಿಯಂತೂ ಶುದ್ಧ ಬಿಳೀ ಖಾದಿ. ಕೈತಪ್ಪಿಯಾದರೂ ಮಾಸಿದ ಬಟ್ಟೆ ತೊಡುವುದಿಲ್ಲ. ಮಾತಿನಲ್ಲಿ ಸವಿಜೇನು. ಹಿತವಾಗಿ ರುಚಿಯಾಗಿ ತರ್ಕಮಾಡುತ್ತ ಇದಿರಾಳಿಯನ್ನು ತಮ್ಮ ಅಭಿಪ್ರಾಯಕ್ಕೇ ತಿರುಗಿಸುತ್ತಾರೆ.

ಈ ಹಿಡಿತವೇ ಇವರನ್ನು ಗಾಂಧೀಜಿಯ 'ದೂತ' ನನ್ನಾಗಿ ಮಾಡಿವೆ. ಮಹಾದೇವಭಾಯಿಯ ಸಂಧಾನ ಕೌಶಲ ಈಚೆಗೆ ಹಿಂದುಸ್ಥಾನಕ್ಕೆ ಗೊತ್ತೇ ಆಗಿದೆ. ಸರದಾರ ಪೃಥ್ವೀಸಿಂಗರ ಬಿಡುಗಡೆ, ದೆಹಲಿಯ ರಾಜಕೀಯ ಕೈದಿಗಳ ಸ್ವಾತಂತ್ರ್ಯ ಇವರ ಕೈವಾಡದ ಫಲ. ವೈಯಕ್ತಿಕ ಜೀವನಗಳಲ್ಲಿ, ರಾಷ್ಟ್ರೀಯ ಜೀವನದಲ್ಲಿ ಇವರ ಆ ನೈಪುಣ್ಯ ಹೇಗೆ ಪರಿಣಾಮಕಾರಿಯಾಗಿದೆ ಎಂಬುದು ಜನರಿಗೆ ತಿಳಿಯುವುದು ಕಷ್ಟ.

ಇವರ ಬಾಳಿಗೇ ಬಣ್ಣ ಕೊಟ್ಟ ಈ ಕಲಾವಂತಿಕೆಗೆ ಇವರ ಸ್ವಾವಲಂಬನೆ, ಆತ್ಮನಿರೀಕ್ಷಣೆಗಳೇ ತಳಹದಿಯೆನ್ನಬಹುದು. ದೇಸಾಯಿ ಎಲ್ಲ ಕೆಲಸವನ್ನೂ ತಾವೇ ಮಾಡಿಕೊಳ್ಳುತ್ತಾರೆ. ತಮ್ಮ ಅರಿವೆ ಅಂಚಡಿ ತಾವೇ ಒಗೆದು ಮಡಿಮಾಡುತ್ತಾರೆ. ತಮ್ಮ ಕೋಣೆ ತಾವೇ ಗುಡಿಸುತ್ತಾರೆ. ತಮ್ಮ ಎಲ್ಲ ವಸ್ತುಗಳನ್ನೂ ತಾವೇ ಸರಿಯಾಗಿಡುತ್ತಾರೆ. ದುರ್ಗಾಬೇನ್ ಇದ್ದರೂ ಈ ಕಾರ್ಯಕ್ರಮದಲ್ಲಿ ವ್ಯತ್ಯಾಸವೇನೂ ಆಗುವುದಿಲ್ಲ. ಆತ್ಮನಿರೀಕ್ಷಣೆಯು ಗಾಂಧೀ ಗುಂಪಿಗೆ ಒಂದು ಲಕ್ಷಣವಾದರೂ ದೇಸಾಯಿ ಒಂದು ತೂಕ ಹೆಚ್ಚು. ಅವರ ಹತ್ತಿರ ಯಾವಾಗಲೂ ಒಂದು ಡಿಕ್ಷನರಿ ಇದ್ದೇ ತೀರಬೇಕು. ಯಾವ ಮಾತು ಎಲ್ಲಿ ಒಂದು ಬಣ್ಣ ಹೆಚ್ಚಾಯಿತೊ ಏನೋ. ಇನ್ನೂ ತುಸು ಸರಿಮಾಡಲು ಬಂದರೆ ಏಕೆ ಬೇಡ ಎಂದು ತೂಕಮಾಡುವ ಸ್ವಭಾವ.

ಸರಳತೆಯೂ ಮಹಾದೇವಭಾಯಿಯ ಜೀವನಕ್ಕೊಂದು ಸಿಂಗಾರವಾಗಿದೆ. ಇಡೀ ಹಿಂದುಸ್ಥಾನಕ್ಕೇ—ಕೆಲವು ಮಟ್ಟಿಗೆ ಜಗತ್ತು—ಇವರದು ಕೇಂದ್ರ ಕಾರ್ಯಾಲಯ. ಆದರೂ ಕುರ್ಚಿಯಿಲ್ಲ ಮೇಜಿಲ್ಲ. ಇವರಿಗೆ ಕಾರ್ಯಾಲಯವೊಂದು ಖಾಸಗೀ ಕೋಣೆಯೊಂದು, ಹೀಗೆ ಎರಡಿಲ್ಲ.

ಎಲ್ಲಾ ಒಂದೇ. ನೆಲದ ಮೇಲೆ ಅಲ್ಲೇ ತಯಾರಾದ ಒಂದು ಚಾಪೆ. ಸುತ್ತಲೂ ಪತ್ರಿಕೆ, ಪತ್ರ, ಪುಸ್ತಕ. ಒಂದು ಮೂಲೆಯಲ್ಲಿ ರಾಟೆ. ಇದಿರಿನಲ್ಲಿ ಉರುಟಾದ ಕಪಾಟುಗಳು; ಅವುಗಳ ತುಂಬ ಪುಸ್ತಕ, ಕಾಗದ. ಇವರ ಕಣ್ಣಿನ ಕನ್ನಡಕ ಕೂಡಾ ನಿಕ್ಕಲ್ ಕಟ್ಟಿನದು. ಅದೂ ಓಬೀರಾಯನ ಕಾಲದ್ದು.

ದುರ್ಗಾಬೇನಳ ಮಾತು ಬಂತಷ್ಟೆ. ಆಕೆ ಇಂದಿಗೂ ಸನಾತನಿ. ಗಾಂಧೀಜಿಯ ಅನೇಕ ಸುಧಾರಣೆಗಳು ಆಕೆಗೆ ಒಗ್ಗುವುದಿಲ್ಲ. ಮಹಾದೇವಭಾಯಿ ಹರಿಜನರ ವಿಷಯವಾಗಿ ಮಾಡಬಹುದಾದ ಆಚರಣೆ ಆಕೆಗೆ ಸರಿಕಾಣುವುದಿಲ್ಲ. ಆದರೆ ಇವರ ದಾಂಪತ್ಯದಲ್ಲಿ ಎಳ್ಳಷ್ಟೂ ವಿರಸವಿಲ್ಲ. ಆಕೆಗೆ ತನ್ನ ಮನಸ್ಸಿಗೆ ಬಂದಂತೆ ನಡೆಯಲು ಸಂಪೂರ್ಣ ಸ್ವಾತಂತ್ರ್ಯವಿದೆ. ಮಹಾದೇವ ದೇಸಾಯಿ ಈ ವಿಷಯದಲ್ಲಿ ಗಾಂಧೀ ಗುಂಪಿಗೆ ಆದರ್ಶವಾಗಿದ್ದಾರೆ. ಗಾಂಧೀಜೀ ಕೂಡ ಕಸ್ತೂರಬಾಗೆ ಅಷ್ಟು ಸ್ವಾತಂತ್ರ್ಯವನ್ನು ಕೊಟ್ಟಿರಲಿಲ್ಲವೇನೋ ಎನಿಸುತ್ತದೆ.

ಕೆಲವು ಕಾಲದ ಹಿಂದೆ ಮಹಾದೇವ ದೇಸಾಯಿ ಸಂಸಾರ ಸಮೇತರಾಗಿ ಉತ್ಕಲಕ್ಕೆ ಹೋಗಿದ್ದರು. ಜಗನ್ನಾಥ ಕ್ಷೇತ್ರವಿದೆ ಅಲ್ಲಿ. ದೇವರ ದರ್ಶನ ಮಾಡಿಕೊಂಡು ಬರೋಣವೆಂದು ದುರ್ಗಾಬೇನಳ ಆಸೆ. ಆದರೆ ಆ ಮಂದಿರದಲ್ಲಿ ಗಾಂಧೀಜನಕ್ಕೆ ಪ್ರವೇಶವಿಲ್ಲ. ಹರಿಜನರಿಗೆ ಪ್ರವೇಶವಿಲ್ಲದ ದೇವಾಲಯಗಳಲ್ಲಿ ತಾವು ಕಾಲಿಡುವುದಿಲ್ಲವೆಂದು ರಾಮೇಶ್ವರದಲ್ಲಿ ಗಾಂಧೀಜೀ ಶಪಥ ಮಾಡಿದ ದಿನವೇ ಗಾಂಧೀವಾದಿಗಳಿಗೆ ಅದೊಂದು ಸಂಪ್ರದಾಯವಾಯಿತು. ಮಹಾದೇವಭಾಯಿಗೆ ಬಹಳ ಪೇಚಿಗಿಟ್ಟಿತು. ಜೀವನದ ಜೊತೆಗಾತಿಯಾದವಳಿಗೆ ತಾವು ಕೊಡಬಹುದಾದ ಸುಖ ಬಹಳ ಕಡಮೆ. ಆಕೆಗೂ ಏನೂ ಬಯಸುವ ಸ್ವಭಾವವಿಲ್ಲ. ಆದರೆ, ಆಕೆ ಆತ್ಮತೃಪ್ತಿಗಾಗಿ ಎಂದು ಜಗನ್ನಾಥ ದರ್ಶನ ಮಾಡಿದರೆ ಬಾಪು ಸಿಟ್ಟಾಗುವುದು ನಿಜ. ಗಾಂಧೀವಾದಿಗಳೆಲ್ಲರೂ ಮೂಗು ಮುರಿಯುವುದಂತೂ ಶತಸ್ಸಿದ್ಧ. ಕಡೆಗೆ ಮಹಾದೇವಭಾಯಿಯ ಸಮರಸ ಜೀವನ, ಕಲಾವಂತಿಕೆಗೇ ಜಯವಾಯಿತು. ಸತ್ಯ, ಅಹಿಂಸೆಗಳನ್ನು ಹೊಸ ಬಣ್ಣದಲ್ಲಿ ತೋರಿಸಿದರು.

ಉತ್ಕಲದಿಂದ ಮರಳಿ ಬಂದ ಮೇಲೆ ಇದೊಂದು ದುರಂತ ಪ್ರಕರಣವೇ ಆಯಿತು. ಮಹಾದೇವನಂಥವನು ಕೂಡಾ ಹೀಗೆ ಮಾಡಿದರೆ ಗಾಂಧೀ ವಾದದ ಗತಿಯೇನು ಎಂದು ಗುಲ್ಲು ಮೊದಲಾಯಿತು. ಗಾಂಧೀಜಿಗೂ ಇವರು ಮಾಡಿದುದು ಸರಿಕಾಣಲಿಲ್ಲ. ಒಂದು ದಿನ ಕೊಂಚ ಬಲವಾಗಿಯೇ ವಾಕ್ಪ್ರಹಾರವಾಯಿತು. ಹಿಂದೆ ಎಷ್ಟೋ ಸಲ ಗಾಂಧೀಜೀ ಶಿಷ್ಯನನ್ನು ಕಡು ವಾಗಿ ಟೀಕಿಸಿದುದುಂಟು. ಕೆಲವು ಸಲ ಸತ್ಯಾಗ್ರಹ ಮಾಡಿದುದೂ ನಿಜ. ಒಮ್ಮೆ ಉಪವಾಸವನ್ನೂ ಮಾಡಿದರೋ ಏನೋ! ಅದನ್ನೆಲ್ಲ ಭಾಯಿ ಹರಕೆ, ಹಸಾದವೆಂದು ಹೊತ್ತಿದ್ದರು. ಅದರಿಂದ ತಮ್ಮ ಬಾಳನ್ನು ಹಸ ಮಾಡಿಕೊಂಡರು. ಆಗ ತಾನು ಮಾಡಿದುದು ತಪ್ಪು; ತಿಳಿಯದೆ ಮಾಡಿದ ಕೆಲಸ. ಗಾಂಧೀಜಿಯೊಡನೆ ತಮ್ಮ ಹೆಂಡತಿ ಮಾಡಿದುದು ಸರಿಯೆಂದು ವಾದಿಸಿದರು. ಇಬ್ಬರಿಗೂ ಸಮಾಧಾನವಾಗಲಿಲ್ಲ.

ಮಹದೇವಭಾಯಿ ಬಹಳ ಕರಗಿಹೋದರು. ಗುರುಚರಣಗಳನ್ನು ಕಣ್ಣೀರಿಂದ ತೊಳೆದು ವರ್ಧಾಕ್ಕೆ ಹಿಂದಿರುಗಿ ಬಂದರು. ದುರ್ಗಾಬೇನ್ ಇವರಿಗಾಗಿ ಕಾದಿದ್ದಳು. ಅಂದೇ ಗಾಂಧೀಜಿಗೆ ಮಹಾದೇವ ದೇಸಾಯಿಯ ರಾಜೀನಾಮೆಯ ಚೀಟಿ ತಲಪಿತು.

ಕಾವ್ಯ ಕಾದಂಬರಿಗಳಲ್ಲೂ ಕಾಣಬಾರದ ಘಟ್ಟ ಅದು. ಕಲ್ಪನೆಯ ಕಿರುಗೈಗೆ ಎಟುಕದ ಸತ್ಯವೃತ್ತ. ನಿಜವಾಗಿಯೂ ಸತ್ಯದ ಸವಿ, ಸೊಬಗು ಕಲ್ಪನೆಯಲ್ಲಿಲ್ಲ.

ಗುರುಶಿಷ್ಯರ ನಡುವೆ ಒಂದು ಅಗ್ನಿಪರೀಕ್ಷೆಯೇ ಆಯಿತು. ದೇವರ ಮನಸ್ಸಿಗೆ ಇಷ್ಟು ಸಾಕು ಎನಿಸಿದರೆ ನಾನು ಮಾಡುವುದಾದರೂ ಏನು? ಗುರುಸೇವೆ, ತದ್ವಾರಾ ದೇಶಸೇವೆ, ಈ ೨೦ ವರ್ಷ ಮಾಡಿಸಿದವನು ಅವನು. ಇಂದಿಗೆ ನನ್ನ ಕೆಲಸ ಮುಗಿಯಿತು ಎಂದು ಅವನೆಂದರೆ ನನಗೆ ತಳಮಳ ವೇಕೆ? ಹೀಗೆ ಮಹಾದೇವ ದೇಸಾಯಿಯ ವಿಚಾರ ನಡೆದಿತ್ತು. 'ದೇವರು ಕಲ್ಲಾದರೆ ಭಕ್ತನೂ ಪಾಷಾಣವಾಗಬೇಕೆ! ಇದೆಲ್ಲಿಯ ನ್ಯಾಯ?' ಎಂದು ಕೊರಗಿದರು ಗಾಂಧೀಜೀ.

ಕೊನೆಗೆ ಇಬ್ಬರೂ ಸೋತರು; ಸೋತು ಗೆದ್ದರು ಮಹಾದೇವ ಹವೆ ಬದಲಿಸಲು ಸಿಮ್ಲಾಕ್ಕೆ ಹೋಗಬೇಕಾಯಿತು. ಹೋಗುವ ಮುನ್ನೇ

ರಾಜೀನಾಮೆಯ ಕಾಗದದ ಚೂರುಗಳು ಸೇವಾಗ್ರಾಮದ ಹೊಲಗಳಲ್ಲಿ ಹಾರಿ ಹೋಗಿ ಅಡಗಿಕೊಂಡಿದ್ದವು.

ಮಹದೇವಭಾಯಿ ಗಾಂಧೀಜಿಗೆ ಲಕ್ಷ್ಮಣನಿದ್ದಂತೆ, ಆತ್ಮಸಾಕ್ಷಿಯಂತೆ ಎಂದು ಹೇಳಿದುದು ನಿಜ. ಸಾಧಾರಣವಾಗಿ ಗುರು–ಶಿಷ್ಯರ ಸಂಬಂಧ ಸೂಜಿಗಲ್ಲು ಕಬ್ಬಿಣದ ರೀತಿ. ಇವರದು ಹಾಗಲ್ಲ. ಪರಸ್ಪರವಾದ ಸೆಳೆತ. ಅವರಂಥ ಗುರು ದೊರೆತುದು ಇವರ ಜೀವನದ ಭಾಗ್ಯವೆಂದರೆ, ಇವರಂಥ ಶಿಷ್ಯ ಲಭಿಸಿದುದೂ ಅವರ ಪುಣ್ಯದ ಫಲ. ರಾಮಕೃಷ್ಣ ಪರಮಹಂಸರ ಸರ್ವ ತಪಸ್ಸನ್ನೂ ಹೀರಿ, ಗುರುವನ್ನು ಬೆಳಗಿಸಿ ವಿವೇಕಾನಂದ ಸ್ವಾಮಿ ಶಿಷ್ಯತ್ವದ ಆದರ್ಶವನ್ನು ಜಗತ್ತಿಗೆ ತೋರಿದರು. ಮಹಾದೇವಭಾಯಿ ಗುರುವಿನ ಜೀವನದಲ್ಲಿ ತಮ್ಮ ಜೀವನವನ್ನು ಲೀನಗೊಳಿಸಿ, ಅವರ ಶ್ರುತಿಗೆ ತಮ್ಮ ದನಿಗೂಡಿಸಿ, ಅವರ ಕುಂಚಕ್ಕೆ ತಮ್ಮ ಬಣ್ಣ ಒದಗಿಸಿ, ರಸಮಯ ಗೆಳೆತನದ ಆದರ್ಶ ಚಿತ್ರವನ್ನು ತೋರುತ್ತಿದ್ದಾರೆ.

*        *        *        *

ಸೇವಾಗ್ರಾಮದಿಂದ ವರ್ಧಾಕ್ಕೆ ಕುದುರೆಗಾಡಿ ವೇಗವಾಗಿ ಬರುತ್ತಿತ್ತು. ಆಗಲೆ ಸಂಜೆ ಹೊತ್ತು ಮೀರಿತ್ತು. ಇದುರಿಗೆ ಮುಗಿಲೆಲ್ಲ ಕಂಪಾಗಿ, ಹಳದಿಯಾಗಿ, ಬೆಳಕು ಮಿದುವಾಗಿತ್ತು. ಹಗಲೆಲ್ಲ ಉರಿದುರಿದು, ಕಾವಾರಿ, ಸೂರ್ಯ ಆಗತಾನೆ ತಣ್ಣಗಾಗಿದ್ದ. ಬಂಗಾರದಂಥ ಆ ಮೂರೂ ಸಂಜೆಯ ಚಿತ್ರ ಇನ್ನೂ ಕಣ್ಣಿಗೆ ಕಟ್ಟಿದೆ.

ಗಾಡಿಯಲ್ಲಿ ನಾವಿಬ್ಬರೆ. ಮಹಾದೇವಭಾಯಿಯೆ ಮಾತು ಮೊದಲು ಮಾಡಿದರು ನನಗೆ ಮಾತಾಡುವಷ್ಟು ಬಲವಿರಲಿಲ್ಲ ಮನಸ್ಸು ತುಂಬಿಹೋಗಿತ್ತು. ರೆಕ್ಕೆ ಹರಿದುಹೋದ ಹಕ್ಕಿ ಗರಿಗೆದರಲು ಮಾಡಿದ ಪ್ರಯತ್ನದಂತೆ ಮನಸ್ಸು ಎಲ್ಲಿಗೋ ಹಾರಲು ಏನನ್ನೋ ನೆನೆದುಕೊಳ್ಳಲು ತವಕಪಡುತ್ತಿತ್ತು. ತಗಲಿದ್ದ ಬಾಣವನ್ನು ಸೆಳೆದು ತೆಗೆಯದೆ, ಆಗಿದ್ದ ಗಾಯವನ್ನು ತೊಳೆದು ಕಟ್ಟದೆ, ಚೇತರಿಸಿಕೊಳ್ಳಲೂ ಸಾಧ್ಯವಿರಲಿಲ್ಲ.

ಮಹಾದೇವಭಾಯಿ ಕನಿಕರದಿಂದ ನಗೆಯಾಡುತ್ತ ಮಾತಾಡಿದರು. 'ತಮ್ಮ, ಈ ಗಾಯ ಮಾಗಿ ಹೊಸಚೇತನ ಬಂದಾಗ ನಿನಗೆ ಗೊತ್ತಾದೀತು, ಇದರ ಸೌಭಾಗ್ಯ. ಬಾಪು ಸಿಟ್ಟಾದರೆಂದು ನೊಂದುಕೊಳ್ಳುತ್ತೀಯಾ?'

ನನಗೆ ಮಾತು ಬರಲಿಲ್ಲ. ಹನಿಗಣ್ಣಾಯಿತು. 'ಭಾಯಿ, ಈ ಬದುಕು ಬಲು ಕಷ್ಟದ್ದು. ಮೈಯೆಲ್ಲ ಕಣ್ಣಾದರವೆ ಸಾಲದು. ಇಪ್ಪತ್ತು ನಾಲ್ಕು ಗಂಟೆ ಎಚ್ಚರವಾಗಿದ್ದರೂ ಸಾಲದು ಸತ್ಯಾಗ್ರಹ ಅಸಿಧಾರಾ ವ್ರತ. ಇಂಥ ಪ್ರಸಂಗ ಈ ಬದುಕಿನಲ್ಲಿ ದಿನ ದಿನದ ಅನುಭವ, ತಮ್ಮ. ನಿನಗೆ ಗೊತ್ತಿಲ್ಲವೋ ಏನೋ, ನನ್ನಿಂದ ಬಾಪೂ ಬಲು ಕಷ್ಟ ಪಟ್ಟಿದಾರೆ. ಇಷ್ಟಾಗಿಯೂ ಅವರ ಮನಸ್ಸಿಗೆ ತಕ್ಕಂತೆ ನಡೆದು ಕೊಳ್ಳುವುದು ನನಗಾಗಿಲ್ಲ.

'ನಿನ್ನ ಹಾಗೆ ಎಷ್ಟೋಸಲ ಮಾತು ಮುರಿದಿದೇನೆ: ಆಡಿದಂತೆ ನಡೆಯಲಾರದೆ ಅವರನ್ನು ನೋಯಿಸಿದೇನೆ. ಆ ಕತೆ ಹೇಳಿದರೆ ದೊಡ್ಡದೊಂದು ಪುರಾಣವಾದೀತು. ಒಂದು ಸಲ ನಾ ಮಾಡಿದ ತಪ್ಪಿಗಾಗಿ ಬಾಪು ಹದಿನೈದು ದಿನ ಉಪವಾಸ ಮಾಡಿದರು, ಸಾಬರ್ಮತಿ ಆಶ್ರಮದಲ್ಲಿದ್ದಾಗ. ಅವರಿಗೆ ಸಿಟ್ಟು ಬರುವಂತೆ ಎಷ್ಟುಸಲಮಾಡಿದೇನೋ. ಈ ಅನುಭವವೆಲ್ಲ ನಮ್ಮ ಜೀವಕ್ಕೆ ಪುಟ ಕೊಟ್ಟಹಾಗೆ. ಸಲಸಲಕ್ಕೂ ಮೇಲಿನ ಕಸರು ಕಳೆದು ಒಳಗಿನ ಶುದ್ಧ ಜೀವ ಹೆಚ್ಚು ಹೆಚ್ಚಾಗಿ ಬೆಳಗಬೇಕು. ಬಾಪು ಹೇಳುವುದಿಲ್ಲವೆ, ನೀವೆಲ್ಲ ಪ್ರಹ್ಲಾದನಂತೆ ಆಗಬೇಕು. ತಂದೆಯೆ ಕೊಟ್ಟ ವಿಷ ಕುಡಿದು ಧನ್ಯನಾಗಲಿಲ್ಲವೆ ಪ್ರಹ್ಲಾದ! ಅದು ಸತ್ಯಾಗ್ರಹ; ಅದು ಸತ್ಯಶೋಧನೆ ಆ ಮನೋದಾರ್ಢ್ಯ ನಮಗೆ ಬರಬೇಕು.'

ಮಹಾದೇವಭಾಯಿಯ ಮಾತು ಮುಗಿದಾಗ ವರ್ಧಾ ತಲುಪಿದ್ದೆವು. ಬಜಾಜವಾಡಿಯಲ್ಲಿ ನಾಲ್ಕು ಗಳಿಗೆ ಕೂತು ಹರಟೆ ಹೊಡೆದು ಆ ಬೆಳದಿಂಗಳಲ್ಲೆ ಭಾಯಿ ಆಶ್ರಮಕ್ಕೆ ಹಿಂತಿರುಗಿ ಹೋದರು. ಊರ ಅಂಚಿನ ತನಕ ಜೊತೆಗೆ ಹೋಗಿ ಅವರು ಹೋದ ದಾರಿಯನ್ನೇ ನೋಡುತ್ತಾ ಎಷ್ಟೋ ಹೊತ್ತು ನಿಂತಿದ್ದೆ.

ಮತ್ತೆ ಮಹಾದೇವಭಾಯಿಯನ್ನು ಕಣ್ಣಿಂದ ನೋಡಲಿಲ್ಲ. ಇನ್ನು ನೋಡುವ ಹಾಗೂ ಇಲ್ಲ. ಆದರೆ ಆ ಚಿತ್ರ, ಆ ಅನುಭವ ಮರೆಯುವ ಹಾಗೂ ಇಲ್ಲ.

* * *

ಮಹಾದೇವಭಾಯಿಯ ಮನಸ್ಸು ಬಲು ಮೆದುವು; ಬಹು ಸೂಕ್ಷ್ಮ. ಮಾತು ಸವಿ, ರಸಕವಳವಿದ್ದಂತೆ. ನುಡಿಜಾಣರಿದ್ದಂತೆ ಭಾಯಿ ನಡೆ

ಜಾಣರೂ ಹೌದು. ಅಪಾರವಾದ ಲೋಕಾನುಭವದಿಂದ ಮಾಗಿ ಮಾಗಿ ಮಾಗಿಸುತ್ತಿದ್ದ ಜೀವ ಅವರದು. ಎಷ್ಟು ಜನರ ಪರಿಚಯ! ಎಂಥ ಜನರ ಗೆಳೆತನ! ಗಾಂಧೀಜಿಗೆ ಪರಿಚಿತರಾದವರೆಲ್ಲರ ಗುರುತು ಆಶ್ರಮವಾಸಿಗಳಿಗಿಲ್ಲ; ಇರುವುದು ಸಾಧ್ಯವೂ ಇಲ್ಲ. ಆದರೆ ಮಹಾದೇವಭಾಯಿಗೆ ಪರಿಚಯವಿಲ್ಲದವರ ಗುರುತು ಗಾಂಧೀಜಿಗೇ ಇದ್ದಿರಲಾರದು. ಗಾಂಧೀಜಿಗೇ ಇದ್ದಿರಲಾರದು. ಗಾಂಧೀಜಿಯನ್ನು ನೋಡಬಂದವರೆಲ್ಲ ಭಾಯಿಯನ್ನು ಕಂಡರು; ಕಂಡು ಮೆಚ್ಚಿದರು, ಅವರ ಗೆಳೆತನ ಮಾಡಿದರು. ಆ ಗೆಳೆತನವೊಂದು ಅಮೂಲ್ಯ ಅನುಭವ, ಮರೆಯಲಾರದ ನೆನಪು ಎಂದುಕೊಂಡರು.

ಆಶ್ರಮದ ನಿಷ್ಠುರ ವ್ರತಜೀವನದಲ್ಲಿ ಮಹಾದೇವಭಾಯಿಯ ಪ್ರಭಾವ ಒಂದು ಮೃದುಸ್ವರ. ಒಡಲ ದಂಡಿಸುವ ಯೋಗ ವಿದ್ಯೆಯಲ್ಲಿ ಒಬ್ಬರನ್ನೊಬ್ಬರು ಮೀರಿಸಿದ ಜನ ಆಶ್ರಮದ ತುಂಬ ಇದಾರೆ. ಒಬ್ಬರದು ಸಪ್ಪೆಕೂಳಾದರೆ ಮತ್ತೊಬ್ಬರದು ಬೇವಿನ ಸೊಪ್ಪು. ಒಬ್ಬರು ದಿನಕ್ಕೆರಡು ಗಂಟೆ ಪಾರ ತೆಗೆದರೆ ಇನ್ನೊಬ್ಬರು ನಾಲ್ಕು ಗಂಟೆ. ಮಹಾದೇವಭಾಯಿ ರಸಜೀವಿ. ಆನಂದವೇ ಬಾಳಬುಗ್ಗೆಯೆಂದು ನಂಬಿದ ಕವಿಜೀವ. ಅವರದು ಹಠಯೋಗವಲ್ಲ, ರಾಜಯೋಗವೂ ಅಲ್ಲ; ಭಕ್ತಿಯೋಗ. ಆತ್ಮ ಸಮರ್ಪಣದ ರಸಯೋಗ. ಗಾಂಧೀಜಿಯನ್ನೇ ಜೀವನ ಸರ್ವಸ್ವವೆಂದು ನಂಬಿ, ಅವರ ಕೈಂಕರ್ಯವೇ ತನ್ನ ಗುರಿಯೆಂದು ತಿಳಿದಿದ್ದರು ಭಾಯಿ. ಅವರ ಚರಣಕಮಲದಲ್ಲಿ ತಮ್ಮ ಬಾಳನ್ನು ಮುಡುಪಾಗಿ ಸಲ್ಲಿಸಿದ್ದರು.

ಮಹಾದೇವ ಭಾಯಿಯದು ಸುಂದರ ರೂಪು. ಅವರ ಕಣ್ಣಿನಲ್ಲಿ ಪ್ರೀತಿ, ಸೌಹಾರ್ದ ತುಂಬಿ ತುಳುಕುತ್ತಿತ್ತು. ಅಗಲವಾದ ಹಣೆ, ನೀಳವಾದ ಮೂಗು, ಸ್ವಚ್ಛವಾದ ಉಡುಪು. ಮಹಾದೇವ ಭಾಯಿಯ ವ್ಯಕ್ತಿತ್ವ ಮನಮೋಹಕವಾದುದು. ಆ ಸೆಳೆತಕ್ಕೆ ಸಿಗದವರು ಕಡಿಮೆ.

ಬಾಲ್ಯದಲ್ಲಿ ಭಾಯಿ ಬಲು ಬಡತನ ಅನುಭವಿಸಿವರಂತೆ. ಅದರ ಫಲವಾಗಿ ಅವರ ಜೀವ ಮಾಗಿ ಮಿದುವಾಯಿತು. ಬರೆಯ ಬರುವ ಹೊತ್ತಿಗೆ ಇಪ್ಪತ್ತೈದನೆಯ ವಯಸ್ಸಿಗೇ ಗುರು ದರ್ಶನವಾಯಿತು. ಜೀವನದ ಗುರಿ

ಕೈಗೆ ಎಟಕುವಂತಾಯಿತು. ಆ ಜನ್ಮಸಾಫಲ್ಯದ ಆನಂದ ಅವರ ಮೋರೆಯಲ್ಲಿ ಹೊಳೆಯುತ್ತಿತ್ತು ; ಕಣ್ಣಲ್ಲಿ ಮಿರುಗುತಿತ್ತು.

ತಮ್ಮ ಬಾಳು ಹಾಗೆ ಪರಿವರ್ತನವಾದ ಗಳಿಗೆಯನ್ನು, ಗಾಂಧೀಜಿಯ ದರ್ಶನದ ಅಮೃತಮುಹೂರ್ತವನ್ನು ದೇಸಾಯಿ ತಾವೇ ವರ್ಣಿಸಿದ್ದಾರೆ. ಆ ಭಕ್ತ ತನ್ನ ಪಾಲಿನ ಭಗವಂತನನ್ನು ಗುರುತಿಸಿಕೊಂಡ ದಿನದ ಚಿತ್ರವನ್ನು ತಾವೇ ಬಣ್ಣಿಸಿದ್ದಾರೆ.

"೧೯೧೭ ರಲ್ಲಿ ಗೋಧ್ರಾದಲ್ಲಿ ಮೊದಲನೆ ಗುಜರಾತ್ ಪ್ರಾಂತ ರಾಜಕೀಯ ಪರಿಷತ್ತು ನಡೆಯಿತು. ಆಗಲೆ ನನಗೆ ಬಾಪೂ ದರ್ಶನವಾದುದು. ಸೊಗಸಾದ ದಿನ; ತುಂಬ ಕಳೆ ತುಂಬಿತ್ತು. ನನಗೆ ಚೆನ್ನಾಗಿ ನೆನಪಿದೆ. ಪರಿಷತ್ತು ಯಶಸ್ವಿಯಾಗಿ ನಡೆಯಿತೆಂದೆನಿಸಿ ನನಗೆಲ್ಲ ಸಂತೋಷವಾಯಿತು. ಬಾಪೂ ಅಧ್ಯಕ್ಷರು. ಉದ್ರೇಕರಹಿತವಾದ ಭಾಷಣಮಾಡಿ. ರಾಜಕೀಯ ಸಮಾಜಿಕ ಸಮಸ್ಯೆಗಳನ್ನು ಆಳವಾಗಿ ವಿಚಾರಮಾಡಿ. ಶಾಂತವಾಗಿ ಬಗೆಹರಿಸಬೇಕೆಂದೂ ಸ್ವದೇಶಿ ಭಾವನೆ ಬೆಳೆಸಬೇಕೆಂದೂ ಹೇಳಿದರು. ಭಾರತದ ರಾಜಕೀಯ ಆರ್ಥಿಕ ಸಾಮಾಜಿಕ ಸಮಸ್ಯೆಗಳ ಬಗ್ಗೆ ಅವರಿಗಿದ್ದ ಅಗಾಧ ಅನುಭವ, ನಿಶ್ಚಿತವಾದ ದೃಷ್ಟಿ ಬಂದಿದ್ದವರನ್ನೆಲ್ಲ ಬೆರಗುಗೊಳಿಸಿದವು. ಆ ವಕ್ತೃತ್ವದಲ್ಲಿ ಒಂದು ಬಗೆಯ ಧಾರೆ, ವಿಲಕ್ಷಣ ಮಾಧುರ್ಯ ಇದ್ದವು. ಆ ವಿಚಾರ ಶುದ್ಧಿ, ಉನ್ನತ ದೃಷ್ಟಿಗಳಿಗೆ ಮೋಹಿತನಾಗದ ಮನುಷ್ಯನಿರಲಿಲ್ಲ.

"ಅವರ ಬಡಕಲು ಮೈ ; ವಿನಯ ತುಂಬಿದ, ಮಿದುವಾದ, ದಯಾರಸ ತುಳುಕಿ ಹರಿಯುತ್ತಿದ್ದ ಅವರ ಮೋರೆ : ಗಂಭೀರವಾದ, ಶಾಂತಿವಂತವಾದ ಅವರ ಕಣ್ಣು ನನ್ನ ಜೀವಕ್ಕೊಂದು ಕಳೆ ತುಂಬಿದವು, ಸ್ಫೂರ್ತಿ ಕೊಟ್ಟವು. 'ನನ್ನ ಧರ್ಮ ಭಗವಂತನ ಸೇವೆ ; ಅಂದರೆ ಮಾನವ ಸೇವೆ, ಸೇವೆಯೆಂದರೆ ಪರಿಶುದ್ಧ ಪ್ರೇಮ. ನಾನು ಭಾರತದ ಕ್ಷುದ್ರ ಕಿಂಕರ ; ಮಾನವಲೋಕದ ಸೇವಕ' ಎಂದು ಬಾಪು ಹೇಳಿದರು. ಎಷ್ಟು ಸರಳ ವಚನ ! ಹೃದಯಾಂತರಾಳದಿಂದ ಉಕ್ಕಿ ಬಂದ ಮಾತು ಅದು. ಅದರಲ್ಲಿ ಅವರ ಸತ್ಯಾರಾಧನೆಯ ನೈಶಿತ್ಯ, ಅವರ ಪ್ರಾಮಣಿಕತನದ ವಾಸ್ತವತೆ ತಿಳಿಯಿತು. ಇದರ ಜೊತೆಗೆ ದೃಢಸಂಕಲ್ಪ, ಅಪಾರ ಧೈರ್ಯ, ದುರ್ವಾರ

ವಾದ ಹಾಸ್ಯಪ್ರವೃತ್ತಿ, ಮೋಹಕವಾದ ಸರಳ ಸ್ವಭಾವ. ಅವರ ಪಾದ ಸೇವೆಗೆ ನನ್ನ ಬಾಳನ್ನು ಒಪ್ಪಿಸಬೇಕೆಂದು ಅಲ್ಲಿಯೇ ಸಂಕಲ್ಪ ಮಾಡಿದೆ. ನನ್ನ ಇಡೀ ಬದುಕಿನಲ್ಲಿಯೇ ಹೊಸದೊಂದು ಪರಿವರ್ತನೆ ಅಕಸ್ಮಾತ್ತಾಗಿ ಆದಂತಾಯಿತು: ದೃಷ್ಟಿಯೇ ಬದಲಾದಂತಾಯಿತು. ಈ ಮಹಾಪುರುಷನ ಸಹವಾಸದಿಂದ ನನಗೊಂದು ಸ್ಫೂರ್ತಿ ದೊರೆತೀತು; ಅದರಿಂದ ಬಾಳು ಉತ್ತಮಗೊಂಡೀತು: ಆ ಜ್ಯೋತಿಯ ಬೆಳಕು ಇಲ್ಲಿಯೂ ಬೆಳಗೀತು ಅನಿಸಿತು. ಅವರ ಆಹಾರ–ವಿಚಾರ, ಬಾಳು ಬದುಕಿನ ಸಾಮರಸ್ಯಕ್ಕೆ ನಾ ಮನಸೋತೆ. ತಮ್ಮ ಸಾಬರ್ಮತಿ ಆಶ್ರಮದಲ್ಲಿ ಇರಬಯಸುತ್ತೇನೆ; ತಾವು ಒಪ್ಪಿದರೆ ಅದೇ ಮಹಾಭಾಗ್ಯ ಎಂದು ಪತ್ರ ಬರೆದುಕೊಟ್ಟೆ. ಬಾಪು ಪತ್ರವನ್ನು ನಿಧಾನವಾಗಿ ಓದಿದರು; ಗಮನಿಸಿ ನೋಡಿದರು. ನನ್ನ ಅಕ್ಷರ ವನ್ನು ಮೆಚ್ಚಿದರೆಂದು ಕಾಣುತ್ತದೆ. ಆ ಮಾತನ್ನು ಹೇಳಿದರು. ಆಶ್ರಮ ದಲ್ಲಿರಲು ಅಪ್ಪಣೆಕೊಟ್ಟರು. ನನಗಿಂತ ಭಾಗ್ಯವಂತರು ಇಡೀ ಜಗತ್ತಿನ ಲ್ಲಿಯೇ ಇಲ್ಲವೆನಿಸಿತು ನನಗೆ"

ಸಾಬರ್ಮತಿ ಆಶ್ರಮವನ್ನು ಸೇರಿದಾಗ ದೇಸಾಯಿಗೆ ಇನ್ನೂ ಹೊಸ ಹರೆಯ. ಕಾಕಾ ಕಾಲೇಲಕರ್, ನರಹರಿಭಾಯಿ ಪಾರೀಖ್, ಕಿಶೋರ ಲಾಲ್ ಮಶ್ರೂವಾಲಾ, ಮಹಾದೇವಭಾಯಿ ಎಲ್ಲರೂ ಒಟ್ಟಿಗೆ ಸೇರಿದರು. ವಿನೋಬಾ ಆಶ್ರಮಕ್ಕೆ ಬಂದದ್ದೂ ಆಗಲೇ. ಅವರೆಲ್ಲ ಆಶ್ರಮದ ತಪೋ ಜೀವನವನ್ನು ನಿಷ್ಠೆಯಿಂದ ನಡೆಸಿದರು. ಮಹಾದೇವಭಾಯಿಯ ರಸ ಜೀವಕ್ಕೆ ಆ ನಿಷ್ಠೆ, ಒಡಲದಂಡನೆ ಸಾಧ್ಯವಾಗಲಿಲ್ಲ. ಎಲ್ಲರೂ ನೂಲಲೇ ಬೇಕೆಂಬ ನಿಯಮ ಭಾಯಿಗೆ ರುಚಿಸಲಿಲ್ಲ. ವಸ್ತ್ರಸ್ವಾವಲಂಬನತತ್ವ ಅವ ರಿಗೆ ಹಿಡಿಸಲಿಲ್ಲ. ಬಾಪೂ ನಡೆಸಿದ ಆಹಾರಪ್ರಯೋಗಗಳಾಗಲಿ, ಇತರ ಸಾಧನೆಗಳಾಗಲಿ ಮಹಾದೇವಭಾಯಿಗೆ ಅನುಕರಣೀಯವಾಗಲಿಲ್ಲ. ಈ ತ್ರಿವಿಧ ತಪಸ್ವಿನ ತ್ರಿಕರಣ ಶುದ್ಧಿಯ ಗೊಂದಲಕ್ಕೆ ಭಾಯಿ ಬೀಳಲಿಲ್ಲ. ಶರಣಾಗತಿಯ ರೀತಿ ಅವರದು. ಅಂತೆಯೆ ಗಾಂಧೀಜಿಯ ಪೂರ್ಣ ಆಶೀ ರ್ವಾದ ಅವರಿಗೆ ದೊರೆತದ್ದು. ಗಾಂಧೀಜಿಗೆ ಮಹಾದೇವಭಾಯಿಗಿಂತ ಪ್ರಿಯತಮಜೀವಿ ಇರಲಿಲ್ಲ. ಗಾಂಧೀಜೀ ಅನಾಸಕ್ತರು; ವಿಶ್ವಪ್ರೇಮಿ. ಎಲ್ಲ ರನ್ನೂ ಏಕರೀತಿಯಾಗಿ ಪ್ರೀತಿಸಬಲ್ಲ ಉದಾರಚರಿತರು. ಆದರೂ ಮಹಾ

ದೇವಭಾಯಿಯ ಮೇಲೆ ಅವರಿಗಿದ್ದ ಒಲವು ಸಾಟಿಯಿಲ್ಲದುದು : ತಮ್ಮನ್ನೇ ತಾವು ಪ್ರೀತಿಸಿಕೊಂಡಂತೆ.

ಗಾಂಧೀಜಿಯ ಬಾಳಿನೊಡನೆ ಮಹಾದೇವಭಾಯಿಯ ಹಾಗೆ ಬೆರೆತು ಹೋದವರು ಯಾರೂ ಇಲ್ಲ. ಜೀವಕ್ಕೆ ದೇಹ ಅಂಟಿಕೊಂಡಂತೆ ಆ ಬೆಸಗೆ. ಹೌದು. ಶ್ರೀ ರಾಜಗೋಪಾಲಾಚಾರ್ಯರು ಹೇಳಿದಂತೆ ಭಾಯಿ ಗಾಂಧೀಜಿಯ ದ್ವಿತೀಯ ದೇಹ. ಗಾಂಧೀಜಿಯ ದೇಹ ಬಳಲಿದಾಗ ಅವರ ಜೀವ, ಮನಸ್ಸು ಭಾಯಿಯ ದೇಹದ ಮೂಲಕ ತನ್ನ ಕೆಲಸ ನಡೆಸುತ್ತಿತ್ತು. ಹಳೆಯ ಕಾಲದ ದೇವರುಗಳಿಗೆ, ಮಹಾ ವಿಭೂತಿಗಳಿಗೆ ನಾಲ್ಕು ಕೈ ಇರುತ್ತಿದ್ದವಂತೆ. ಗಾಂಧೀಜಿಗೆ ಎರಡು ಕೈ ಇದ್ದವು ಎಂದರೂ ಸಂದೀತು.

ಅಂತೆಯೆ ಗಾಂಧೀಜೀ ಇಲ್ಲದ ಜಗತ್ತಿನಲ್ಲಿ, ಜೀವ ಹೋದ ಬರೀ ಗೂಡಾಗಿ ಬದುಕುವುದು ಅವರಿಗೆ ಇಷ್ಟವಿರಲಿಲ್ಲ. ಸಾಧ್ಯವೂ ಇರಲಿಲ್ಲ. ಗುರುಸೇವೆ ಮಾಡುತ್ತ, ಅವರ ಕಣ್ಣು ಮುಂದೆಯೆ, ಅವರ ಚರಣಕಮಲದಲ್ಲಿಯೆ ತನ್ನ ಬದುಕನ್ನು ಮುಗಿಸಬೇಕೆಂದು ಭಾಯಿಗೆ ತುಂಬ ಆಸೆ. ಗಾಂಧೀಜೀ ಪ್ರಾಯೋಪವೇಶ ಮಾಡಿಯಾರು ಎಂಬ ಮಾತನ್ನು ಕೇಳುವುದೂ ಕೂಡ ಭಾಯಿಗೆ ಕಷ್ಟವಾಗಿತ್ತು. ಅದು ಅಶುಭ, ಅಮಂಗಲ. ಆ ವೈಧವ್ಯ ತನ್ನ ಪಾಲಿಗೆ ಬರಬಾರದು.

ದೇವರು ಭಾಯಿಯ ಪ್ರಾರ್ಥನೆ ನಡೆಸಿಕೊಟ್ಟ. ಸತ್ಯದ ದಾರಿ ತುಳಿದ ಜೀವದ ಪ್ರಾರ್ಥನೆ ನಿಷ್ಫಲವಾದೀತೇ? ಮಹಾ ದೇವಭಾಯಿ ತನ್ನ ಆತ್ಮಸಮರ್ಪಣೆಯ ಸಿದ್ಧಿಯನ್ನು ಪಡೆದರು. ಸಾವನ್ನು ಗೆದ್ದು ಅಮರರಾದರು.



# ಬಾಪೂಜೀ

'ಒಂದೊಂದು ಗಡಿಯಾರ, ಒಂದೊಂದು ಹೊತ್ತು.'

ಈ ನಾಡನುಡಿ ನನ್ನ ಅನುಭವಕ್ಕೆ ಬಂದ ಸಂದರ್ಭ ಬಹಳ ಸಂತೋಷವನ್ನು; ಸ್ವಲ್ಪ ವಿಲಕ್ಷಣವಾದದ್ದು. ಅಕ್ಟೋಬರ ಹನ್ನೊಂದನೆಯ ದಿನ ನಮ್ಮ ಸ್ಥಾಯೀಸಮಿತಿ ಸೇರಿತ್ತು ವರ್ಧಾದಲ್ಲಿ. ಮಧ್ಯಾನ್ಹ ೨ ಗಂಟೆಗೆ ನಮ್ಮ ಸಮಿತಿಗೆ ಬರುವುದಾಗಿ ಗಾಂಧೀಜೀ ಹೇಳಿದ್ದರು. ಅಖಿಲಭಾರತ ಸಂಸ್ಥಾನ ಪರಿಷತ್ತಿನ ಸಭೆಗೆ ಗಾಂಧೀಜೀ ಬಂದುದು ಅದೇ ಮೊದಲನೆ ಸಲ. ಕಾಂಗ್ರೆಸ್ಸಿಗೂ ಪರಿಷತ್ತಿಗೂ ಮುಂದೆ ಏನು ಸಂಬಂಧವಿರಬೇಕೆಂಬ ವಿಚಾರ ಚರ್ಚೆಯಾಗಬೇಕಿತ್ತು. ಸಂಸ್ಥಾನಗಳ ಚಳುವಳಿಯೂ ತನ್ನ ಕಾರ್ಯಕ್ರಮದ ಒಂದು ಅಂಗವೆಂದು ಕಾಂಗ್ರೆಸ್ಸು ತಿಳಿಯಬೇಕು. ವರ್ಕಿಂಗ್ ಕಮಿಟಿಯು ಉಪಸಮಿತಿಯನ್ನು ನಿರ್ಮಿಸಿ ಪರಿಷತ್ತಿಗೆ ಮಾರ್ಗದರ್ಶಿಯಾಗುವ ಹೊಣೆ ಅದಕ್ಕೆ ಹೊರಿಸಬೇಕು. ಇದು ನಮ್ಮ ವಿಚಾರ. ಸಮಿತಿಗೆ ಅಧ್ಯಕ್ಷರಾದ ಜವಾಹರಲಾಲರಿಗೂ ಅದೇ ಅಭಿಪ್ರಾಯವಿತ್ತು. ಗಾಂಧೀಜೀ ಅಸ್ತು ಎಂದರೆ ವರ್ಕಿಂಗ್ ಕಮಿಟಿಯಲ್ಲಿ ಆ ಮಾತು ತೆಗೆಯಬಹುದು ಎಂದು ಅವರನ್ನು ಸಮಿತಿಗೆ ಬರಲು ಬೇಡಿಕೊಳ್ಳಲಾಗಿತ್ತು. ಆದ್ದರಿಂದ ಎಲ್ಲರಿಗೂ ಉತ್ಸುಕತೆ.

ಗಾಂಧೀಜೀ ಒಂದು ಬಗೆಯಿಂದ ಕಾಲವನ್ನು ಗೆದ್ದವರು. ಹೊತ್ತಿಗೆ ಸರಿಯಾಗಿ ಕೆಲಸ ಮಾಡುವುದರಲ್ಲಿ ಅವರದೇ ಹೆಸರು. ಅದೇಕೋ ೨ ಗಂಟೆಗೆ ಬರಲಿಲ್ಲ. ಐದು ನಿಮಿಷ ನೋಡಿ ಕೆಲಸ ಮೊದಲಿಟ್ಟೆವು. ಸ್ವಲ್ಪ ಹೊತ್ತಿನಲ್ಲಿ ಅವರೂ ಮಹಾದೇವ ದೇಸಾಯಿಯೂ ಬಂದರು.

ಬಂದವರೇ 'ಸ್ವಲ್ಪ ತಡವಾಯತು ಕ್ಷಮಿಸಬೇಕು. ನಿಮ್ಮ ವೇಳೆಯಲ್ಲಿ ೧೦ ಮಿನಿಟು ಪೋಲುಮಾಡಿದೆ' ಎಂದರು ತಮ್ಮ ಸೊಂಟದ ಗಡಿಯಾರದ ಕಡೆಗೆ ನೋಡುತ್ತ.

ಜವಾಹರರು ತಮ್ಮ ಕೈಗಡಿಯಾರ ನೋಡಿದರು; ೨-೨೦ ಆಗಿತ್ತು. 'ಇಲ್ಲ ೨೦ ಮಿನಿಟಾಗಿದೆ' ಎಂದು, ನಗುತ್ತ 'You are behind time'

ನೀವು ಕಾಲಕ್ಕೆ ಹಿಂದೆ ಇದೀರಿ ಎಂದರು. 'Sometimes it is permissible to go slow'. ಕೆಲವು ವೇಳೆ ಕೊಂಚ ನಿಧಾನವಾದರೂ ಪರವಾಯಿಲ್ಲ; ಗಾಂಧೀಜೀ ನಗುತ್ತ ಉತ್ತರ ಕೊಟ್ಟರು.

'ಈ ಗಡಿಯಾರ ನೀನು ಕೊಟ್ಟದ್ದೇ! ಜವಾಹರ್' ಎಂದರು ಗಾಂಧೀಜೀ ಮತ್ತೆ, ಏನೋ ನೆನಪಾದವರಂತೆ.

ಜವಾಹರರಿಗೂ ಆ ಮಾತು ನೆನಪಾಯಿತು. 'ಆಗ ಸರಿಯಾಗಿಯೇ ನಡೆದಿತ್ತು' ಎಂದು ಹೊತ್ತು ಸರಿಮಾಡಲು ಬಾಪೂಜಿಯ ಗಡಿಯಾರಕ್ಕೆ ಕೈಹಾಕಿದರು.

ನನ್ನ ಕಣ್ಣು ತಾವಾಗಿಯೆ ನನ್ನ ಗಡಿಯಾರದ ಕಡೆಗೆ ಹೊರಳಿದವು. ಅದರಲ್ಲಿ ೧೫ ಮಿನಿಟು. ನನ್ನ ಪಕ್ಕದಲ್ಲಿ ಬಲವಂತರಾಯ್ ಮೆಹತಾ, ಅವರದು ೨ ಮಿನಿಟು ಕಡಿಮೆ. 'So you are ahead' ನಿನ್ನದು ಸ್ವಲ್ಪ ಮುಂದೋಟ ಜವಾಹರ್, ಎಂದರು ಗಾಂಧೀಜೀ.

ಎಲ್ಲರೂ ತಮ್ಮ ತಮ್ಮ ಗಡಿಯಾರ ನೋಡಿಕೊಂಡರು. ಒಂದಕ್ಕೆ ಒಂದು ಕೂಡಲಿಲ್ಲ.

'ಒಂದೊಂದು ಗಡಿಯಾರ, ಒಂದೊಂದು ಹೊತ್ತು' Two watches never agree' ಮಹಾದೇವ ದೇಸಾಯಿ ನಗುತ್ತ ಹೇಳಿದರು.

ವರ್ಧಾ ವಾತಾವರಣದಲ್ಲಿ ಗಾಢ ಗಾಂಭೀರ್ಯವಿದ್ದಷ್ಟೇ ವಿನೋದ ಉಲ್ಲಾಸವೂ ಇದೆ. ಗಾಂಧೀಜಿಯಂತೂ ತುಂಬಾ ವಿನೋದಪ್ರಿಯರು. ಅನೇಕ ಸಲ ವಿನೋದವಾಗಿಯೇ ಕೆಲವು ಮಹತ್ವದ ಮಾತನ್ನು ಆಡುತ್ತಾರೆ. ಒಮ್ಮೆ ಅವರಿಗೆ ಒಂದು ಮಾನಪತ್ರ ಕೊಟ್ಟಾಗ, 'ನಾನು ನಿಮ್ಮೂರಿಗೆ ನಾಲ್ಕನೆಯ ಸಲ ಬಂದರೂ ಮಾನಪತ್ರ ಕೊಡುತ್ತೀರಿ—ಅಂದರೆ ನಿಮ್ಮ ಮನೆಯವನಲ್ಲ ಹೊರಗಿನವ ಎಂದಹಾಗಾಯಿತು. ಹೋಗಲಿ, ಹೋದ ಸಲ ಬಂದಾಗ ಅದರ ಜೊತೆಯಲ್ಲಿ ಒಂದು ನಿಧಿ ಕೊಟ್ಟಿರಿ. ಒಂದೊಂದು ಸಲಕ್ಕೂ ನನ್ನ ಬೆಲೆ ಇಳಿದಂತಾಗಿದೆ. ಈ ಸಲ ನಿಧಿಯೇ ಇಲ್ಲವಲ್ಲ' ಎಂದರು.

ಗಾಂಧೀಜೀ ತಮ್ಮ ಸಹಿಯಕ್ಕೆ ಬಂದವರನ್ನು ಹೇಗೆ ಹದಗೊಳಿಸುತ್ತಾರೆಂಬುದು ಅನುಭವಕ್ಕೆ ಮಾತ್ರ ತಿಳಿಯಬಲ್ಲ ಮಾತು. ಕ್ಷುದ್ರ

ಪುರುಷರಲ್ಲಿ ಪೌರುಷವನ್ನು ಹೇಗೆ ಬೆಳಗಿಸುತ್ತಾರೆಂಬುದೂ ಅಷ್ಟೆ. ಬಾಪೂಜೀ ಜನರ ಮನಸ್ಸನ್ನು ಅರಳಿಸುವ ರೀತಿ, ಅಲ್ಪರೆಂದು ಅಂಜಿಕೊಳ್ಳುವವರಿಗೆ ಅಭಯ ಹಸ್ತವನ್ನು ನೀಡುವ ಜಾಣ್ಮೆ, ಅವರ ಬಳಿಗೆ ಬಂದವರನ್ನು ಮುಗ್ಧ ಮೋಹಿತರನ್ನಾಗಿ ಮಾಡುತ್ತವೆ. ಅಜ್ಞಾನ, ಅಧೈರ್ಯದ ಕತ್ತಲೆಯಲ್ಲಿ ತಮ್ಮ ಆಶೀರ್ವಾದ ಅಭಿಮಾನಗಳ ದೀವಿಗೆ ಹತ್ತಿಸುತ್ತಾರೆ.

ಅವರು ನಡೆಸಿದಷ್ಟು ದೊಡ್ಡ ಚಳುವಳಿಗಳನ್ನು ಯಾರೂ ನಡೆಸಿಲ್ಲ. ಹಿಂದೂಸ್ಥಾನದಂಥ ವಿಶಾಲ ಖಂಡದ ಭಾಗ್ಯವಿಧಾತರಾಗುವ ಹೊಣೆಯನ್ನು ಮತ್ತೆಲ್ಲಿಯೂ ನಿಶ್ಶಸ್ತ್ರರಾಗಿ ಯಾರೂ ವಹಿಸಿಲ್ಲ. ಸಾವಿರಾರು ವರ್ಷಗಳಿಂದ ಹಿಂದೂ ಧರ್ಮಕ್ಕೆ ಹೊಲಸಿನಂತೆ ಅಂಟಿಕೊಂಡು ಬಂದಿರುವ ಹೊಲೆತನವನ್ನು ತೊಳೆದುಬಿಡುವ ಸಂಕಲ್ಪ ಸಾಧಾರಣವಾದುದಲ್ಲ. ಸಿಂಗಾರ ಬಂಗಾರಗಳಿಗೆ ಮನಸೋತ ಈ ಕಾಲದಲ್ಲಿ ಸರಳತೆಯೇ ಶ್ರೇಷ್ಠವೆನ್ನುವುದೂ, ವಿರಾಮ ವಿರಾಮವೆಂದು ಬಾಯಿಬಿಡುವ ಈ ಯಂತ್ರಯುಗದಲ್ಲಿ ದುಡಿಯಿರಿ, ದುಡಿಯಿರಿ ಎಂಬ ಖಾದೀ ಮಾತು ಆಡುವದೂ ಗಾಂಧೀಜಿಯದೇ ಗುತ್ತಿಗೆ.

ಇಷ್ಟೆಲ್ಲ ಕೊನೆಯಿಲ್ಲದ ಬಯಲಿನಲ್ಲಿ ಅವರ ಆಟ ನಡೆದಿದ್ದರೂ ಗಾಂಧೀಜಿಗೆ ವೈಯಕ್ತಿಕ ಜೀವನವೇ ಹೆಚ್ಚಿನದು. ಜನರ ಬಾಳು ಬದುಕಿನಲ್ಲಿ ಅವರಿಗಿರುವ ಶ್ರದ್ಧೆ ಎಲ್ಲಕ್ಕೂ ಮೀರಿದುದು. ಜನರೇ ಅವರ ಬಯಲಿನ ಚಿಕ್ಕೆ. ಅವರ ಚಳುವಳಿಯ ಮೂಲಾಧಾರ ಅರ್ಥಬಲವೂ ಅಲ್ಲ, ಅಂಗಬಲವೂ ಅಲ್ಲ; ಸತ್ಯ ಬಲ. ಪಶುಬಲವಲ್ಲ ಆತ್ಮಶಕ್ತಿ. ಆದುದರಿಂದಲೇ ಅವರಿಗೆ ಸ್ವರಾಜ್ಯಕ್ಕಿಂತ ಸತ್ಯ ಒಂದು ತೂಕ ಹೆಚ್ಚು. ಅವರ ಚಳುವಳಿಗೆ ದೇಶವಲ್ಲ ಕೇಂದ್ರ, ಮಾನವ ಜೀವನ.

ಬಾಪೂಜಿಯ ಜೀವನದಲ್ಲಿ ಸತ್ಯಶೋಧನೆಗಿದ್ದಷ್ಟೇ ಬೆಲೆ ವ್ಯಕ್ತಿಶೋಧನೆಗೆ ಇದೆ. ನೀರಿನಿಂದ ಹಾಲನ್ನು ಬೇರೆಯಾಗಿ ಹೀರುವ ಹಂಸದಂತೆ ಇವರ ಕೈವಾಡ. ಒರೆಗಲ್ಲಿಗೆ ಸಿಕ್ಕಿ ಗೆಲ್ಲಬಹುದಾದ ಧೀರನನ್ನು ಗುರುತಿಸಲೆಂದು ಇವರು ಕಣ್ಣು ಸದಾ ತೆರೆದಿವೆ. ಅಂಥವರನ್ನು ತನ್ನವರನ್ನಾಗಿ ಮಾಡಿಕೊಳ್ಳಲು ಇವರ ಕೈಯಲ್ಲಿ ಹೂಮಾಲೆ ಯಾವಾಗಲೂ

ಇರುತ್ತದೆ. ಆ 'ಸ್ವಯಂವರ' ಒಮ್ಮೆ ಆದರೆ ಮುಗಿಯಿತು; ಅವರು ಆ ಭಾಗ್ಯಶಾಲಿಗೆ ತೋರುವ ವಿಶ್ವಾಸ, ನೀಡುವ ಬೆಂಬಲ ಅಲೌಕಿಕ ವಾದುದು. ಗಾಂಧೀಜಿಯದು ಬರೀ ಹದ್ದಿನ ಕಣ್ಣಲ್ಲ, ಇವರ ಅಭಿಮಾನ ವಿಷಕನ್ಯಾ ಪ್ರಣಯದಂತಲ್ಲ. ಅದು ಭ್ರಮರ ಕೀಟ ನ್ಯಾಯ. ಮಿಡಾಸನ 'ಸ್ವರ್ಣ ಸ್ಪರ್ಶ'ವಲ್ಲ; ಇವರದು ಪರುಸಗಲ್ಲಿನ ಆತ್ಮಸ್ಪರ್ಶ.

ಇವರ ಸಂಸರ್ಗದಲ್ಲಿ ಆ ಇಂದ್ರಜಾಲವಿದೆ. ಇವರ ಕೃತಿಯಲ್ಲಿ ಆ ಸೆಳೆತವಿದೆ. ಅದೊಂದು ಸುಂಟರಗಾಳಿ. ಇವರ ಕರ್ಮ ಕೌಶಲವೇ ಅಂಥದು. ಇವರು ಮಾಡಿದ ಯಾವ ಕೆಲಸವೂ ಇವರು ತುಳಿದ ಯಾವ ಹಾದಿಯೂ ಇವರದೇ ಆಗಿ ಉಳಿದಿಲ್ಲ. ತಮ್ಮ ಹಿಂದೆ ತಮ್ಮ ಬಂಧು ಬಳಗ, ತಮ್ಮ ಜೊತೆಗಾರರು ತಮ್ಮ ಗುರುತಿನವರು ಕಡೆಗೆ ಇಡೀ ದೇಶವೇ ಆ ಹಾದಿ ತುಳಿದಾರು, ಆ ಕೆಲಸ ಮಾಡಿಯಾರು. ಆ ಸುಂಟರಗಾಳಿಗೆ ಸಿಗದಿರುವದು ಸಾಧ್ಯವಿಲ್ಲ. ಇದಕ್ಕೆ ಅಂಜಿಯೇ ಸಂಪ್ರದಾಯವಾದಿಗಳೂ, ಕೋಮುವಾರು ನಾಯಕರೂ ಇವರ ಹತ್ತರ ಬಾರದೆ ದೂರದೂರವೇ ಸರಿಯುತ್ತಾರೆ. ಆದರೆ ಗಾಂಧೀಜಿಗೆ ಅನಂತವಾದ ವಿಶ್ವಾಸವಿದೆ, ಅವರೂ ಹತ್ತರಬಂದಾರು ಎಂತ. ಆ ದೂರದ ದಿನಕ್ಕಾಗಿ ಕಾಯುವ ತಾಳ್ಮೆಯೂ ಇದೆ.

'ಗಾಂಧೀಜೀ ಬರೀ ಗೊಡ್ಡು ಕರ್ಮವಾದಿ, ರಸವಿಲ್ಲ ಕಲೆಯಿಲ್ಲ' ಎಂದುಕೊಂಡವರು ಬಹಳ. ಅವರು ಹೇಳುವ ಕೆಲಸದಲ್ಲಿ, ತೋರಿಸುವ ಹಾದಿಯಲ್ಲಿ, ಕುದಿಯಿಲ್ಲ ಕಾವಿಲ್ಲ; ಅವರ ನುಡಿ ಬರಿ ಘಂಟಾನಾದ, ವೀಣೆಯ ಸ್ವನವಲ್ಲ ಎನ್ನುವದು ರೂಢಿಯಾಗಿ ಬಿಟ್ಟಿದೆ. ಆದರೆ ಗಾಂಧೀ ಜಿಯ ಜೀವನ ನಿಜವಾಗಿ ರಸಮಯವಾದುದು. ಕ್ರೌಂಚಗಳೆರಡು ಕಾಮಮೋಹಿತಗಳಾಗಿದ್ದಾಗ ನಿಷಾದನಿಂದ ಹೆಣ್ಣು ಹಕ್ಕಿಗೆ ಒದಗಿದ ನೋವನ್ನು ನೋಡಿ ವಿರಕ್ತನಾದ ವಾಲ್ಮೀಕಿ ಋಷಿಗೆ ಕರುಣೆಯುಕ್ಕಿಬಂತು. ಆ ನೋವು, ಆ ಕರುಣೆ, ಕಾವ್ಯವಲ್ಲವೆ? ಜಗತ್ತಿನ ನೋವು ಕಾವುಗಳನ್ನು ಹೀಗೆ ಅನುಭವಿಸಬಲ್ಲ ಹೃದಯಕ್ಕಿಂತಲೂ ರಸಕ್ಕೆ ಬೇರೆಲ್ಲಿದೆ ಸ್ಥಾನ? ಹಿಂದುಸ್ಥಾನದ ಸುಖದುಃಖಗಳನ್ನು, ಆಶೆ ಭೀತಿಗಳನ್ನು ಗಾಂಧೀಜೀ ಗುರುತಿಸಿದಂತೆ ಯಾರು ಗುರುತಿಸಿದಾರೆ? ಜೀವನದಿಂದ ರಸವನ್ನು ಬೇರೆ

ಮಾಡಿ ಬರೀ ಭಾವನೆಯಲ್ಲಿ ಅದನ್ನು ಹುಡುಕಿದರೂ ಗಾಂಧೀಜಿಗೆ ಸೋಲಿಲ್ಲ. ಅವರ ಜೀವನವೇ ಒಂದು ಉತ್ತಮ ರಸಭರಿತ ಕಾವ್ಯ.

ಬಾಪು ಉತ್ತಮ ಜಾತಿಯ ಶಿಲ್ಪಿ. ಕಲ್ಲು ಮಣ್ಣಿನಲ್ಲಿ ಮಾಟವಾದ ಮೂರ್ತಿಗಳನ್ನು ಕುಸುರಿಸುವ ಶಿಲಾಶಿಲ್ಪಿಯಲ್ಲ. ಮಣ್ಣಿಗಿಂತಲೂ ಅದೃಢವಾದ, ಕಲ್ಲಿಗಿಂತಲೂ ಕಬ್ಬಿಣವಾದ ಮಾನವ ಜೀವನದಲ್ಲಿ ಆತ್ಮ ವನ್ನು ಕೊನರಿಸುವ ಜೀವಶಿಲ್ಪಿ.

ಇಂಥ ಮಹಾಜೀವಿಗಲ್ಲದೆ ಮತ್ತಾರಿಗೆ ಸಾಧ್ಯ. ಕ್ರಾಂತಿ-ಪುನಃ ಸೃಷ್ಟಿಗಳಿಗೆ ಕೈಹಾಕುವದು. ಇಂಥ ಮಹೋದಾತ್ತ ಚರಿತನಲ್ಲದೆ ಮತ್ತಾರು ಮಾನವ ಕೋಟಿಗೆ ಆ ಅಭಯಹಸ್ತ ಕೊಡಬಲ್ಲವರು!

ವೈಸರಾಯರ ಮೊದಲ ಪ್ರಕಟನೆ ಇನ್ನೂ ಬಂದಿರಲಿಲ್ಲ. ಅಖಿಲ ಭಾರತ ಕಾಂಗ್ರೆಸ್ಸು ಸಮಿತಿ ವರ್ಧಾದಲ್ಲಿ ನೆರೆದು ಯುದ್ಧದ ವಿಷಯವಾಗಿ ಈಗ ಪ್ರಕಟವಾಗಿರುವ ನಿರ್ಣಯವನ್ನು ಮಾಡಿತು. ಬೇರೆ ಬೇರೆ ಗುಂಪುಗಳ, ಮಾತುಕತೆ, ನಾಯಕರ ಭೇಟಿಯು ಗೊಂದಲ ಮುಗಿದಿರಲಿಲ್ಲ. ಯುದ್ಧ-ಅಹಿಂಸೆ-ಸತ್ಯಾಗ್ರಹ ಇವುಗಳ ತೊಡಕು ಕಗ್ಗಂಟಾಗಿ ಹೋಗಿತ್ತು. ಮುಂದಾಳುಗಳಾದವರೆಲ್ಲ ತಮತಮಗೆ ತೋರಿದಂತೆ ಮಾತನಾಡಿ ಹಾದಿ ಗಾಣದಂತಾಗಿದ್ದರು. ಬಾಪು ಬೇಸತ್ತು ನೊಂದು ಮಾತನ್ನೇ ಬಿಟ್ಟರು. ನಿರಂತರ ಮೌನವನ್ನು ಹಿಡಿದರು.

ಅಂಥ ನಿರಾಸೆಯ ಹಿಮದಲ್ಲೇ ಪರ್ಣಕುಟಿಗೆ ಹೋಗಬೇಕಾಯಿತು. ಸಂಜೆಯ ಊಟದ ಹೊತ್ತು. ಬಾಪು ಊಟಮಾಡುತ್ತ ಮಾತಾಡುತ್ತಿದ್ದರು. ಊಟವಾದ ಮೇಲೆ ಇತ್ತ ನೋಡಿ 'ಓಹೋ ಏನು ಬಂದದ್ದು? ಒಳ್ಳೇ ಹೊತ್ತಿಗೆ ಬಂದೆ, ನಿನ್ನ ಪುಣ್ಯ, ಮಾತಾಡುವಾಗಲೇ ಬಂದೆ. ಇಲ್ಲದಿದ್ದರೆ ಈಗಂತೂ ನಾನು ನಿರಂತರ ಮೌನದಲ್ಲೇ ಇದೇನೆ' ಎಂದರು.

ಗಾಳೀ ಸವಾರಿಗೆ ಹೊರಟರು. ಆಗಲೇ ಸೂರ್ಯನು ಕೆಂಪಗೆ ನೆಲಕ್ಕೆ ಇಳಿದಿದ್ದ. ಸುತ್ತಲೂ ಗಿಡಗಂಟೆಯಿಲ್ಲದ ಮರುಭೂಮಿಯಂಥ ಹಾದಿ. ನೆರಳು- ನಿಡಿದಾಗಿದ್ದವು. ಎಲ್ಲೂ ಸೊಲ್ಲಿರಲಿಲ್ಲ. ಭೂಮಿತಾಯಿಯು ತಪೋಕನ್ಯೆಗೆ ದಿನತುಂಬಿ ಬಂದಂತೆ ಇತ್ತು.

ರಾಜಗೋಪಾಲಾಚಾರ್ಯರು ದೆಹಲಿಯಿಂದ ಬರಬೇಕಾದ ಹೊತ್ತು. ಗಾಳಿ ಕೂಡ ಸ್ತಬ್ಧವಾಗಿ ಹಾದಿ ಕಾಯುತ್ತಿತ್ತು. ಏನೋ! ಇದ್ದ ಆಸೆ ಅದೊಂದೇ ಕೊನೆಯದು. ಅವರೂ ಬರಿಗೈಯಲ್ಲಿ ಬಂದರೆ—

ಗಾಂಧೀಜೀ ಕೇಳಿದರು 'ಎಷ್ಟು ದಿನವಾಯಿತು ಹೊರಗೆ ಬಿದ್ದು ?'

'ಹನ್ನೊಂದು ತಿಂಗಳಾಯಿತು, ಬಾಪು'

'ಮನೆಯವರೆಲ್ಲಾ—'

'ಅಲ್ಲೇ'

'ಇಷ್ಟೇ ದಿನವಾಯಿತು. ಇನ್ನೂ ಒಂದು ತಿಂಗಳು ತಡೆ. ದುಡುಕ ಬೇಡ.'

ಅವರು ಹಿಂದಿರುಗುವಾಗ 'ಹೋಗಿಬರುತ್ತೇನೆ' ಎಂನು ನಮಸ್ಕಾರ ಮಾಡಿ ವರ್ಧಾ ಹಾದಿ ಹಿಡಿದೆ.

ಭಾನುವಾರ, ೧೫—೧೦—೩೯. .

'ಉಧೊ ಉಧೋ! ಒಳಗಿರುವ ಬೆಳಕೆ ಬೆಳಕೇ
ಉಧೊ ಉಧೋ! ಹೊರಗೆ ಹರಿ ಏಕೆ ಒಳಕೇ'

